

# ಸಪ್ತಗಿರಿ

ಡಿಸೆಂಬರ್ 84

ಬೆಲೆ : ಒಂದು ರೂಪಾಯಿ

ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸ ಪತ್ರಿಕೆ



ಏಳು ನಾರಾಯಣ ಏಳು ಲಕ್ಷ್ಮೀ ರಮಣ
ಏಳು ಶ್ರೀಗಿರಿಯೊಡೆಯ ವೆಂಕಟೇಶಾ

ದಾಸರೆಲ್ಲರು ಬಂದು ಧೂಳಿ ದರ್ಶನಗೊಂಡು
ಲೇಸಾಗಿ ತಾಳ ದಂಡಿಗೆಯ ಪಿಡಿದು
ಕೇಶವನೆ ನಿಮ್ಮ ಸಿರಿನಾಮವನು ಸ್ಮರಿಸುತಲಿ
ವಾಸುದೇವನೆ ಉದಯದಲಿ ಪಾಡುತಿಹರು 1

ಕಾಸಿದ್ದ ಹಾಲುಗಳ ಕಾವಡಿಯು ತುಂಬಿಟ್ಟು
ಲೇಸಾದ ಕೆನೆ ಮೊಸರು ಬೆಣ್ಣೆಯನೆ ಮೆದ್ದು
ಶೇಷಶಯನನೆ ಏಳು ಸಮುದ್ರ ಮಥನವ ಮಾಡು
ದೇಶ ಕೆಂಪಾಯಿತೇಳಯ್ಯ ಹರಿಯೆ 2

ಅರಳು ಮಲ್ಲಿಗೆ ಜಾಜಿ ಪರಿಮಳದ ಪುಷ್ಪಗಳ
ಸುರರು ತಂದಿಹರಯ್ಯ ಸುಜನರೊಡೆಯ
ಅರವಿಂದಲೋಚನನೆ ಕೋಳಿ ಕೂಗಿತು ಕೇಳು
ಪುರಂದರ ವಿಠಲನೇ ಏಳು ಬೆಳಗಾಯಿತು 3

– ಶ್ರೀ ಪುರಂದರದಾಸರು




ಗೌರವ ಸಂಪಾದಕರು :

ಎಸ್. ಲಕ್ಷ್ಮೀನಾರಾಯಣ ಐ.ಎ.ಎಸ್.,

ಸಂಪಾದಕ :

ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :

ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ

ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ॥


ಸಂಪುಟ ೧೫]　　ಡಿಸೆಂಬರ್ ೧೯೮೮　　[ಸಂಚಿಕೆ ೭


# ವಿಷಯಸೂಚಿ


| | | |
|---|---|---|
| ಸಂಪಾದಕೀಯ | | ... 4 |
| ಶ್ರೀಮದ್ಭಗವದ್ಗೀತೆ | | ... 5 |
| ಗೀತಾ ಮಹಾತ್ಮ್ಯೆ | ಕಂದಾಡೈ ಕೇಶವನ್ | ... 13 |
| ಭಗವತ್ಸಂದೇಶ | ಡಾ॥ ಸರ್ವೋತ್ತಮನ್ | ... 17 |
| ಆಂಜನೇಯ ಸುಪ್ರಭಾತ | ಕೆ. ದೊರೆಸ್ವಾಮಿ ಅಯ್ಯಂಗಾರ್ | ... 23 |
| ಶಕಪುರುಷ ಶಾಲಿವಾಹನ | ಕೂಡಲಿ ಜಗನ್ನಾಥ ಶಾಸ್ತ್ರಿ | ... 25 |
| ಮನೆಯೆ ಮೊದಲ ಪಾಠಶಾಲೆ | ಮತ್ತೀಗೆರೆ ಅನಂತು | ... 27 |
| ನಟರಾಜನಡಿದಾವರೆಯಲ್ಲಿ | ವಿದ್ವಾನ್ ಬ. ನ. ಗುಂಡೂರಾವ್ | ... 33 |
| ಸೋಮದೇವನ ಅಕ್ರೂರ ಚರಿತೆ | ಎಸ್. ಪುಷ್ಪ | ... 35 |
| **ಯುವವಾಣಿ** | | |
| ಭಗವದ್ಗೀತೆ ಯಾರಿಗೆ | ಎಸ್. ವಿ. ಹೇಮಾವತಿ | ... 9 |
| **ಕಿಶೋರಜಗತ್** | | |
| ಗೀತಾರ್ಥಸಾರ | ವೈ. ನ. ನಾಗರಾಜ | ... 11 |
| **ಗೃಹಲಕ್ಷ್ಮಿ** | | |
| ಪುರಂದರದಾಸರು ಚಿತ್ರಿಸಿದ ಯಶೋದಾ ಕೃಷ್ಣ | ಸುಮನ ಬದರೀನಾಥ್ | ... 29 |
| ವಾರ್ತಾಲಹರಿ | | ... 37 |


ರಕ್ಷಾಪತ್ರ ಚಿತ್ರಗಳು :

ಮುಖಪುಟ : ಆಂಡಾಳ್ — ಚಿತ್ರ : ಕೆ. ಜಗದೀಶ್.

ಹಿಂಬದಿಯಲ್ಲಿ : ಶ್ರೀವಿಲ್ಲಿಪುತ್ತೂರು ದೇವಾಲಯ.

ಒಳಗಡೆಯ ಪುಟಗಳಲ್ಲಿ : ತಿರುಮಲೆಯಲ್ಲಿ ಪ್ರಧಾನಮಂತ್ರಿ ಶ್ರೀ ರಾಜೀವ್ ಗಾಂಧಿ.
ತಿರುಮಲೆಯಲ್ಲಿ ಮುಖ್ಯಮಂತ್ರಿ
ಶ್ರೀ ಎನ್. ಟಿ. ರಾಮರಾವ್.



## ತಿ. ತಿ. ದೇವಸ್ಥಾನಗಳ ಹೊಸ ಕಾರ್ಯನಿರ್ವಹಣಾಧಿಕಾರಿಯಾಗಿ

## ಶ್ರೀ ಎಸ್ ಲಕ್ಷ್ಮೀನಾರಾಯಣ

ತಿ. ತಿ. ದೇವಸ್ಥಾನಗಳ ಹೊಸ ಕಾರ್ಯನಿರ್ವಹಣಾಧಿಕಾರಿಯಾಗಿ ಆಂಧ್ರ ಪ್ರದೇಶದ ದೇವಾದಾಯ ಇಲಾಖಾ ಕಮೀಷನರ್ ಆಗಿ ಕೆಲಸ ನಿರ್ವಹಿಸುತ್ತಿದ್ದ ಶ್ರೀ ಎಸ್. ಲಕ್ಷ್ಮೀನಾರಾಯಣ ಐ. ಎ. ಎಸ್; ಅವರು ಅಕ್ಟೋಬರ್ 1984 ರಲ್ಲಿ ಅಧಿಕಾರ ಸ್ವೀಕರಿಸಿದರು.

ಆಂಧ್ರ ಪ್ರದೇಶದ ಅನೇಕ ಜಿಲ್ಲೆಗಳಲ್ಲಿ ಜಿಲ್ಲಾಧಿಕಾರಿಗಳಾಗಿ ಆಡಳಿತ ರಂಗದಲ್ಲಿ ನುರಿತ ಅಧಿಕಾರಿ ಎಂದು ಹೆಸರು ಪಡೆದಿರುವ ಶ್ರೀಯುತರು ತಮ್ಮ ದೀರ್ಘ ದೃಷ್ಟಿ, ಸೇವಾ ಮನೋಭಾವಗಳಿಗೆ ಹೆಸರಾದವರಾಗಿದ್ದಾರೆ.

ಸ್ವತಃ ಉದ್ದಾಮ ಭಕ್ತರೂ ಆಗಿರುವ ಶ್ರೀಯುತರು ತಮ್ಮ ಕಾರ್ಯನಿರ್ವಹಣಾಧಿಕಾರಿಯ ಹುದ್ದೆಯ ಅಂಗವಾಗಿ ಸಪ್ತಗಿರಿ ಮಾಸಪತ್ರಿಕೆಯ ಗೌರವ ಸಂಪಾದಕರೂ ಆಗಿದ್ದಾರೆ.

ಹೀಗಾಗಿ ಸಪ್ತಗಿರಿ ಹೃತ್ಪೂರ್ವಕ ಸ್ವಾಗತವನ್ನು ಬಯಸುತ್ತ ಶ್ರೀ ವೆಂಕಟೇಶ್ವರಸ್ವಾಮಿಯು ಶ್ರೀ ಲಕ್ಷ್ಮೀನಾರಾಯಣ ಅವರಿಗೆ ಅನುಕೂಲನಾಗಲಿ ಎಂದು ಹಾರೈಸುತ್ತದೆ.

# ಶ್ರೀ ಪದ್ಮಾವತೀ ದೇವಾಲಯ



## ಆರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಶ್ರೀ ಪದ್ಮಾವತೀದೇವಿಯವರಿಗೆ ಪ್ರತಿ ಶುಕ್ರವಾರವೂ ಆರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡಲಾಗಿದೆ. ಟಿಕೆಟ್ಟಿಗೆ ರೂ. 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

# ಸಂಪಾದಕೀಯ

ಮಹಾತ್ಮರ ಭಾಷೆ, ಭಾವ, ಬಾಧೆ ನಮಗೆ ಅರ್ಥವಾಗುವುದಿಲ್ಲ. ನಮ್ಮ ಭಾಷೆ, ಬಾಧೆಗಳೇ ಬೇರೆ. ನಮ್ಮ ಮಟ್ಟಿಗೆ ಅವರೆಲ್ಲ ಅರುಳು ಮರುಳು. ಮಕ್ಕಳಂತೆ ಮನಸ್ಸಿ ನಡೆದವರು. ಎಂತಲೇ ಅವರ ಮಾತುಗಳೆಂದರೂ, ಹಾದಿಯೆಂದರೂ, ಹಗುರವಾಗಿ ನಕ್ಕು ಬೇರೆಡೆಗೆ ತಿರುಗುತ್ತೇವೆ. ನಿಜವೆಂದರೆ ಅವರು ನುಡಿದ ವಾಕ್ಯ ಮಾಣಿಕ್ಯಗಳನ್ನು ಗಮನಿಸಿದಲ್ಲಿ ತವನಿಧಿಯೇ ದೊರಕೀತು. ನಮ್ಮಂತೆಯೇ ಹುಟ್ಟಿ ಬೆಳೆದ ಗುಂಡಪ್ಪನವರು ;

ನಾನು ನಾನೇ ನಾನೆನುತ್ತೆ ಕಿರಿಕೊಡದ ನೀರ್
ಗಾನಗೆಯ್ವುದು ಹೆಮ್ಮೆಯಿಂ ಕಡಲ ಮರೆತು

ಎಂದಾಗ ಇದಾವುದೋ ಜೀವಬ್ರಹ್ಮವಾದವೆಂದುಕೊಂಡು ಪುಸ್ತಕವನ್ನು ಮಸ್ತಕದೊಳಟ್ಟುಕೊಳ್ಳುವುದೇ ನಮಗೆ ಅಭ್ಯಾಸ. ದೇವರು ಸರ್ವಾಂತರ್ಯಾಮಿಯೆಂಬುದು ನಮಗೆ ತಿಳಿದದ್ದೇ ಆದರೂ ನೋಡಬೇಕಾದ ಕಡೆ ನೋಡದೆ ತಡಕಾಡುತ್ತೇವೆ. ಅದೇ ಹಿರಿಯರ ನೋವು. ಅದನ್ನು ಸರಿಯಾಗಿ ಗಮನಿಸಿದರೆ ವ್ಯಷ್ಟಿ ಸಮಷ್ಟಿ ಜೀವನಗಳ ನಡುವೆ ಇರುವ ಸಂಬಂಧ ಸೂತ್ರ ಗೋಚರಿಸುತ್ತದೆ.

ಹೀಗೆ ದೇವ ಜೀವನಾದ ವಿಧಾನವನ್ನು ಪುರುಷ ಸೂಕ್ತವೂ, ಜೀವನು ದೇವನಾಗುವ ರೀತಿಯನ್ನು ಮಂತ್ರಪುಷ್ಪವೂ ವಿವರಿಸುತ್ತವೆ.

ಸಹಸ್ರ ಶೀರ್ಷನೂ ಸಹಸ್ರಬಾಹುವೂ ಆದ ಆ ಪರಂಜ್ಯೋತಿ ಮೊದಲಿಗೆ ಎಲ್ಲವನ್ನೂ ಆವರಿಸಿ ಅತ್ಯತಿಷ್ಟದ್ದಶಾಂಗುಲವಾಗಿ ಇದ್ದಿತು.

ಅವಾಙ್ಮನಸ ಗೋಚರವಾಗಿ ವಿಶ್ವಸಮಾಜರೂಪವನ್ನು ಹೊಂದಿದ ಆ ವಿರಾಟ್ ಆಕೃತಿ ಎಂತಹದು ? ಸಮಾಜದ ಇಹಪರ ಹಿತವನ್ನು ಆಲೋಚಿಸಿ ಮುನ್ನಡೆಸುವ ವ್ಯವಸ್ಥೆಯೇ ಮುಖ. ಅತ್ಯಾಚಾರಗಳಿಂದ ರಕ್ಷಿಸುವ ವ್ಯವಸ್ಥೆಯೇ ಬಾಹುಗಳು. ಆರ್ಥಿಕ ಸುಸ್ಥಿರತೆಯನ್ನು ಕಲ್ಪಿಸುವ ವ್ಯವಸ್ಥೆಯೇ ಊರುಗಳು. ಸಮಾಜಕ್ಕೆ ತುಷ್ಟಿ, ಪುಷ್ಟಿ, ಸ್ವಾವಲಂಬನೆಯನ್ನು ಕಲ್ಪಿಸುವ ರೀತಿಯೇ ಪಾದಗಳಾಗಿ ಪರಿಣಮಿಸಿದವು. ಸೂರ್ಯನೇ ನೇತ್ರ, ಚಂದ್ರನು ಹೃದಯ, ಇಂದ್ರಾಗ್ನಿಗಳು ಮುಖ, ವಾಯುವು ಪ್ರಾಣ, ಅಂತರಿಕ್ಷವೇ ನಾಭಿ, ಶಿರವೇ ದೇವಲೋಕಗಳು ಭೂಮಿಯೇ ಪಾದ, ಹೀಗೆ ಸರ್ವಲೋಕ ಸೃಷ್ಟಿ ನಡೆಯಿತು.

ಸಮಾಜದ ವಿರಾಡ್ರೂಪಕ್ಕೆ ರಾತ್ರಿ ಹಗಲು ಎರಡು ಮುಖಗಳು. ಜನನ ಮರಣಗಳಿಲ್ಲದ ದೈವ, ಜನನ ಮರಣ ಬಂಧಿತನಾದ ಜೀವಿಯಾಯಿತು. ನಾರಾಯಣನು ನರನಾದ ರೀತಿಯನ್ನು ತಿಳಿದ ಮಾನವ, ಸಮಾಜರೂಪದ ಅಖಂಡ ಚೈತನ್ಯದಲ್ಲಿ ತಾನೂ ಒಂದು ಭಾಗವೆಂದು ಗುರುತಿಸಿ, ಜನರೂಪೀ ಜನಾರ್ದನ ಸೇವೆಯಲ್ಲಿ ಆಸಕ್ತಿಯಿಂದ ಪ್ರವೃತ್ತನಾಗಬೇಕೆಂದು ಇದರ ಸಾರ.

ಆದರೆ ದೇಹಿಯಾಗಿರುವವರೆಗೆ ಜೀವಿಗೆ ಆದ್ಯಂತ ಭ್ರಮಣ ತಪ್ಪದು. ಎಂತಲೇ ಜೀವಿಯಲ್ಲಿದ್ದು ಆಡಿಸುವ ದೇವನನ್ನು ಇನ್ನೊಂದು ಮಂತ್ರದ ಮೂಲಕ ನೆನಪಿಗೆ ತಂದರು. ತ್ರಿಕಾಲರೂಪಿಯೂ, ಜಡಚೇತನಾತ್ಮಕವೂ ಆದ ಆ ನಾರಾಯಣ ಶಕ್ತಿ ದೇಹದೇವಾಲಯದಲ್ಲಿ ನಾಭಿಯ ಮೇಲೆ ಹೃದಯದ ಕೆಳಗೆ, ಕೆಳಕ್ಕೂ ಮೇಲಕ್ಕೂ ಪ್ರಸರಿಸುತ್ತಾ ಚೈತನ್ಯವನ್ನು ಹರಡುವ ಕಾಂತಿ ಪುಂಜದ ನಡುವೆ, ನೀಲ ತೋಯದ ಮಧ್ಯದ ನವವಿದ್ಯುಲ್ಲೇಖೆಯಂತೆ ಹೊಂದಿ ನೆಲ್ಲುಮುಳ್ಳಿನಂತೆ ಅರಳುತ್ತಿದೆಯೆಂದೂ, ಅದೇ ಬ್ರಹ್ಮ, ಶಿವ, ವಿಷ್ಣು ಎಂದೂ ಮಂತ್ರಪುಷ್ಪ ವಿವರಿಸುತ್ತದೆ.

ಎಂದರೆ ಇವೆರಡರ ಸಾರವೂ ಒಂದೇ. ಮನುಷ್ಯನಾಗಿ ಹುಟ್ಟಿದನಂತರ ಮಾನವ ಮಾಧವನ ಸೇವೆ ಮಾಡುತ್ತ ಮತ್ತೊಂದು ಕಡೆ ಅಂತರ್ಮುಖನಾಗಿ ಸಾಧನೆಯನ್ನು ಮಾಡುತ್ತ – 'ಎರಡು ಕೋಣೆಗಳ ನೀ ಮಾಡು ಮನದಾಲಯದಿ' ಎಂಬುದೇ ಆಗಿದೆ.

ಬ್ರಹ್ಮ ಹೇಳಿದ್ದೂ, ಶಕ್ರ ಪ್ರಚಾರ ಮಾಡಿದ್ದೂ ಆದ ಈ ವಾದವನ್ನು ತಿಳಿದವ ಇಹದಲ್ಲಿಯೇ ಅಮೃತತ್ತ್ವವನ್ನು ಹೊಂದುವನೆಂದೂ ಮೋಕ್ಷಕ್ಕೆ ಇದಕ್ಕೂ ಮಿಂಚಿದ ಮಾರ್ಗ ಬೇರೆಯಿಲ್ಲವೆಂದೂ ಫಲಶ್ರುತಿಯಲ್ಲಿ ಹೇಳಿದೆ. ನಾವೂ ನಮ್ಮ ಒಳಿತಿಗಾಗಿ ಹೇಳಿಕೊಳ್ಳುವ,

ಇಷ್ಟಂ ಮನೀಷಾಣ
ಅಮುಂ ಮನೀಷಾಣ
ಸರ್ವಂ ಮನೀಷಾಣ
ಓಂ ಶಾಂತಿ ಶ್ಶಾಂತಿ ಶ್ಶಾಂತಿಃ

( ಮುಂದುವರೆದದ್ದು )

# ಶ್ರೀಮದ್ಭಗವದ್ಗೀತೆ

## ೧೮ ನೆಯ ಅಧ್ಯಾಯ

ಸುಖಂ ತ್ವಿದಾನೀಂ ತ್ರಿವಿಧಂ
ಶೃಣು ಮೇ ಭರತರ್ಷಭ ।
ಅಭ್ಯಾಸಾದ್ರಮತೇ ಯತ್ರ
ದುಃಖಾಂತಂ ಚ ನಿಗಚ್ಛತಿ ॥ ೩೬

ಯತ್ತದಗ್ರೇ ವಿಷಮಿವ
ಪರಿಣಾಮೇಽಮೃತೋಪಮಮ್ ।
ತತ್ ಸುಖಂ ಸಾತ್ತ್ವಿಕಂ ಪ್ರೋಕ್ತಂ
ಆತ್ಮಬುದ್ಧಿ ಪ್ರಸಾದಜಮ್ ॥ ೩೭

ಅರ್ಜುನ ! ಈಗ ಮೂರು ಬಗೆಯಾಗಿರುವ ಸುಖದ ವಿಷಯವನ್ನು ಕೇಳು. ಯಾವುದನ್ನು ಎಡೆಬಿಡದೆ ಸಾಧಿಸಿದರೆ ಆನಂದದಿಂದ ಒಲಿದುವುದಾಗುತ್ತದೋ, ದುಃಖವೆಂಬುದು ನಿಶ್ಶೇಷವಾಗಿ ಹೋಗಿಬಿಡುವುದೋ, ಯಾವುದು ವ್ಯೈಗೂಡುವುದಕ್ಕೆ ಮೊದಲು ವಿಷದಂತೆ ಕಂಡರೂ ಮೈಗೂಡಿದ ಮೇಲೆ ಅಮೃತದಂತೆ ಹಿತಕರವಾಗಿರುವುದೋ ಆ ತಿಳಿಯಾದ ಬುದ್ಧಿಯಿಂದುಂಟಾದ ಸುಖವು ಸಾತ್ತ್ವಿಕವು.

ವಿಷಯೇಂದ್ರಿಯಸಂಯೋಗಾತ್
ಯತ್ತದಗ್ರೇಽಮೃತೋಪಮಮ್ ।
ಪರಿಣಾಮೇ ವಿಷಮಿವ ತತ್
ಸುಖಂ ರಾಜಸಂ ಸ್ಮೃತಮ್ ॥ ೩೮

ಯಾವುದು ವಿಷಯಗಳ ಮತ್ತು ಇಂದ್ರಿಯಗಳ ಸೇರಿಕೆಯಿಂದಾಗುತ್ತದೋ, ಮೊದಲು ಅಮೃತದಂತೆ ಇದ್ದು ಕೊನೆಗೆ ವಿಷದಂತಾಗುವುದೋ ಆ ಸುಖವು ರಾಜಸವೆನಿಸುವುದು.

ಯದಗ್ರೇ ಚಾನುಬಂಧೇ ಚ
ಸುಖಂ ಮೋಹನಮಾತ್ಮನಃ ।
ನಿದ್ರಾಲಸ್ಯಪ್ರಮಾದೋತ್ಥಂ
ತತ್ತಾಮಸಮುದಾಹೃತಮ್ ॥ ೩೯

ಯಾವ ಸುಖವು ಮೊದಲೂ ಕೊನೆಗೂ ನಿದ್ರೆ, ಸೋಮಾರಿತನ, ಮರೆವು – ಇವುಗಳಿಂದ ಉಂಟಾಗಿ ತನಗೆ ಭ್ರಾಂತಿಯನ್ನುಂಟುಮಾಡುವುದೋ ಅದು ತಾಮಸವೆನಿಸುವುದು.

ನ ತದಸ್ತಿ ಪೃಥಿವ್ಯಾಂ ವಾ
ದಿವಿ ದೇವೇಷು ವಾ ಪುನಃ ।
ಸತ್ತ್ವಂ ಪ್ರಕೃತಿಜೈರ್ಮುಕ್ತಂ
ಯದೇಭಿಃ ಸ್ಯಾತ್ತ್ರಿಭಿರ್ಗುಣೈಃ ॥ ೪೦

ಭೂಮಿಯ ಮೇಲಾಗಲೀ ಸ್ವರ್ಗದಲ್ಲಿ ಇರುವ ದೇವತೆಗಳಲ್ಲಾಗಲೀ ಹುಟ್ಟಿದಾಗಿನಿಂದ ಕಾಣಿಸಿಕೊಂಡಿರುವ ಈ ಮೂರು ಗುಣಗಳ ಸೋಂಕಿಲ್ಲದ ವಸ್ತುವೆಂಬುದಿಲ್ಲ.

ಬ್ರಾಹ್ಮಣಕ್ಷತ್ರಿಯವಿಶಾಂ
ಶೂದ್ರಾಣಾಂ ಚ ಪರಂತಪ
ಕರ್ಮಾಣಿ ಪ್ರವಿಭಕ್ತಾನಿ
ಸ್ವಭಾವಪ್ರಭವೈರ್ಗುಣೈಃ ॥ ೪೧

ಅರ್ಜುನ, ಬ್ರಾಹ್ಮಣ ಕ್ಷತ್ರಿಯ ವೈಶ್ಯ ಎಂಬ ಮೂರು ಜಾತಿಗೂ ಶೂದ್ರರಿಗೂ ಹುಟ್ಟಿದಂದಿನಿಂದ ಕಾಣಿಸಿಕೊಂಡಿರುವ ಗುಣಗಳಿಗೆ ತಕ್ಕಂತೆ ಬೇರೆ ಬೇರೆ ಕರ್ಮಗಳು ಗೊತ್ತಾಗಿರುವುವು

ಶಮೋ ದಮಸ್ತಪಃ ಶೌಚಂ
ಕ್ಷಾಂತಿರಾರ್ಜವಮೇವ ಚ ।



ಜ್ಞಾನಂ ವಿಜ್ಞಾನಮಾಸ್ತಿಕ್ಯಂ
ಬ್ರಹ್ಮಕರ್ಮ ಸ್ವಭಾವಜಮ್ ॥ ೪೨

ಮನಸ್ಸನ್ನು ಭಗವಂತನಲ್ಲಿ ನೆಲೆಗೊಳಿಸುವುದು, ಇಂದ್ರಿಯಗಳನ್ನು ಬಿಗಿಹಿಡಿಯುವುದು, ತಪಸ್ಸು, ಶುಚಿತ್ವ, ಸ್ಮರಣೆ, ಸರಳತನ, ವೇದದ ಅರ್ಥವನ್ನು ತಿಳಿಯುವುದು, ಅದನ್ನು ಅನುಭವಿಸುವುದು, ಈಶ್ವರನೊಬ್ಬನಿರುವನೆಂಬುದು – ಇವು ಬ್ರಾಹ್ಮಣರ ಹುಟ್ಟುಗುಣಕ್ಕೆ ತಕ್ಕ ಕೆಲಸಗಳು.

ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ
ಯುದ್ಧೇ ಚಾಪ್ಯಪಲಾಯನಮ್ ।
ದಾನಮೀಶ್ವರಭಾವಶ್ಚ
ಕ್ಷಾತ್ರಂ ಕರ್ಮ ಸ್ವಭಾವಜಮ್ ॥ ೪೩

ಬಲಿಶಾಲಿಗಳ ಮುಂದೆ ಎದೆಗೆಡದಿರುವುದು, ಹಗೆಗೆ ನೋಡಬ ಕೆಚ್ಚು, ಕಷ್ಟ ಬಂದಾಗ ಕಳವಳಗೊಳ್ಳದಿರುವುದು, ಕೆಲಸವನ್ನು ಸಾಧಿಸುವ ಸಾಮರ್ಥ್ಯ, ಯುದ್ಧದಲ್ಲಿ ಕಾಲಿಗೆ ಬುದ್ಧಿ ಹೇಳದಿರುವುದು, ಯೋಗ್ಯರಿಗೆ ದಾನ ಮಾಡುವುದು, ಸೇವಕರಲ್ಲಿ ಅಧಿಕಾರವನ್ನು ತೋರಿಸುವುದು – ಇವು ಕ್ಷತ್ರಿಯರ ಹುಟ್ಟುಗುಣಕ್ಕೆ ತಕ್ಕ ಕೆಲಸಗಳು.

ಕೃಷಿಗೋರಕ್ಷವಾಣಿಜ್ಯಂ
ವೈಶ್ಯಕರ್ಮ ಸ್ವಭಾವಜಮ್ ।
ಪರಿಚರ್ಯಾತ್ಮಕಂ ಕರ್ಮ
ಶೂದ್ರಸ್ಯಾಪಿ ಸ್ವಭಾವಜಮ್ ॥ ೪೪

ವ್ಯವಸಾಯ, ಪಶುಪಾಲನೆ, ವ್ಯಾಪಾರ ಇವು ಹುಟ್ಟುಗುಣಕ್ಕೆ ತಕ್ಕಂತೆ ವೈಶ್ಯರು ಮಾಡುವ ಕೆಲಸಗಳು, ಸೇವೆಯು ಶೂದ್ರನ ಹುಟ್ಟುಗುಣಕ್ಕೆ ತಕ್ಕ ಕೆಲಸ.

ಸ್ವೇ ಸ್ವೇ ಕರ್ಮಣ್ಯಭಿರತಃ
ಸಂಸಿದ್ಧಿಂ ಲಭತೇ ನರಃ ।
ಸ್ವಕರ್ಮನಿರತಃ ಸಿದ್ಧಿಂ
ಯಥಾ ವಿಂದತಿ ತಚ್ಛೃಣು ॥ ೪೫

ತನ್ನ ತನ್ನ ಕರ್ಮದಲ್ಲಿ ನಿರತನಾದ ಮನುಷ್ಯನು ಜ್ಞಾನವನ್ನು ಪಡೆಯತಕ್ಕ 'ಯೋಗ್ಯತೆಯನ್ನು ಹೇಗೆ ಹೊಂದುತ್ತಾನೆ ಎಂಬುದನ್ನು ಕೇಳು.

ಯತಃ ಪ್ರವೃತ್ತಿರ್ಭೂತಾನಾಂ
ಯೇನ ಸರ್ವಮಿದಂ ತತಮ್ ।
ಸ್ವಕರ್ಮಣಾ ತಮಭ್ಯರ್ಚ್ಯ
ಸಿದ್ಧಿಂ ವಿಂದತಿ ಮಾನವಃ ॥ ೪೬

ಯಾರಿಂದ ಸಮಸ್ತ ವಸ್ತುಗಳ ಸೃಷ್ಟಿ ಯಾಗಿದೆಯೋ, ಯಾರು ಈ ಎಲ್ಲದರಲ್ಲಿಯೂ

# ಕರ್ಮದ ಬಿಡುಗಡೆ

ತುಂಬಿಕೊಂಡಿರುವನೋ ಆ ಪರಮೇಶ್ವರನನ್ನು ತನ್ನ ಕರ್ಮದಿಂದ ಪೂಜೆ ಮಾಡಿದರೆ (ತನ್ನ ಕರ್ಮವನ್ನು ಅವನಿಗೊಪ್ಪಿಸಿ) ಮನುಷ್ಯನು ಆ ಜ್ಞಾನವನ್ನು ಪಡೆಯುವುದಕ್ಕೆ ತಕ್ಕ ಯೋಗ್ಯತೆಯನ್ನು ಹೊಂದುತ್ತಾನೆ.

ಶ್ರೇಯಾನ್ ಸ್ವಧರ್ಮೋ ವಿಗುಣಃ
ಪರಧರ್ಮಾತ್ ಸ್ವನುಷ್ಠಿತಾತ್ ।
ಸ್ವಭಾವನಿಯತಂ ಕರ್ಮ
ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥ ೪೭

ತನ್ನ ಹುಟ್ಟುಗುಣಕ್ಕೆ ತಕ್ಕಂತೆ ಗೊತ್ತಾಗಿರುವ ಕರ್ಮವು ಕೊರತೆಯುಳ್ಳದ್ದಾಗಿ ಕಂಡರೂ ಮತ್ತೊಬ್ಬರ ಹುಟ್ಟುಗುಣದ ಕರ್ಮವನ್ನು ಚೆನ್ನಾಗಿ ನಡೆಸಿದ್ದಕ್ಕಿಂತಲೂ ಮೇಲಾದುದು. ತನ್ನ ಹುಟ್ಟುಗುಣಕ್ಕೆ ತಕ್ಕ ಕರ್ಮವನ್ನು ಮಾಡುವುದರಿಂದ ಪಾಪ ಉಂಟಾಗುವುದಿಲ್ಲ.

ಸಹಜಂ ಕರ್ಮ ಕೌಂತೇಯ
ಸದೋಷಮಪಿ ನ ತ್ಯಜೇತ್ ।
ಸರ್ವಾರಂಭಾ ಹಿ ದೋಷೇಣ
ಧೂಮೇನಾಗ್ನಿರಿವಾವೃತಾಃ ॥ ೪೮

ಅರ್ಜುನ, ತನ್ನ ಹುಟ್ಟುಗುಣಕ್ಕೆ ತಕ್ಕ ಕರ್ಮವು ದೋಷದಿಂದ ಕೂಡಿದ್ದರೂ ಬಿಡಬಾರದು. ಏಕೆಂದರೆ ಅಗ್ನಿಯು ಹೊಗೆಯಿಂದ ಮುಸುಕಿರುವಂತೆ ಎಲ್ಲ ಉದ್ಯೋಗಗಳೂ ದೋಷದ ಮುಸುಕುಳ್ಳವುಗಳಾಗಿ ಇರುವುವು.

ಅಸಕ್ತಬುದ್ಧಿಸ್ಸರ್ವತ್ರ
ಜಿತಾತ್ಮಾ ವಿಗತಸ್ಪೃಹಃ ।
ನೈಷ್ಕರ್ಮ್ಯಸಿದ್ಧಿಂ ಪರಮಾಂ
ಸಂನ್ಯಾಸೇನಾಧಿಗಚ್ಛತಿ ॥ ೪೯

ಯಾವುದರಲ್ಲಿಯೂ ಅತಿ ಮಮತೆಯನ್ನಿಡದೆ ಮನಸ್ಸನ್ನು ಬಿಗಿಹಿಡಿದು ಮತ್ತೇನನ್ನೂ ಬಯಸದೆ ಕರ್ಮಗಳನ್ನು ಮಾಡುವವನು ಕರ್ಮಗಳ ಸಂಬಂಧವಿಲ್ಲದ ಉತ್ಕೃಷ್ಟವಾದ ಸ್ಥಿತಿಯನ್ನು ಹೊಂದುತ್ತಾನೆ.

ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮ
ತಥಾಪ್ನೋತಿ ನಿಬೋಧ ಮೇ ।
ಸಮಾಸೇನೈವ ಕೌಂತೇಯ
ನಿಷ್ಠಾ ಜ್ಞಾನಸ್ಯ ಯಾ ಪರಾ ॥ ೫೦

ಅರ್ಜುನ, ಜ್ಞಾನಸಿದ್ಧಿಯನ್ನು ಹೊಂದಿದವನು ಬ್ರಹ್ಮವನ್ನು ಹೇಗೆ ಪಡೆಯುತ್ತಾನೊ ಅದನ್ನು ಸಂಕ್ಷೇಪವಾಗಿ ಹೇಳುತ್ತೇನೆ, ಕೇಳು. ಈ ಬ್ರಹ್ಮಪ್ರಾಪ್ತಿಯೇ ಜ್ಞಾನದ ಕೊನೆಯ ಫಲ.

ಬುದ್ಧ್ಯಾ ವಿಶುದ್ಧಯಾ ಯುಕ್ತೋ
ಧೃತ್ಯಾತ್ಮಾನಂ ನಿಯಮ್ಯ ಚ ।
ಶಬ್ದಾದೀನ್ವಿಷಯಾಂಸ್ತ್ಯಕ್ತ್ವಾ
ರಾಗದ್ವೇಷೌ ವ್ಯುದಸ್ಯ ಚ ॥ ೫೧

ವಿವಿಕ್ತಸೇವೀ ಲಘ್ವಾಶೀ
ಯತವಾಕ್ಕಾಯಮಾನಸಃ ।
ಧ್ಯಾನಯೋಗಪರೋ ನಿತ್ಯಂ
ವೈರಾಗ್ಯಂ ಸಮುಪಾಶ್ರಿತಃ ॥ ೫೨

ಅಹಂಕಾರಂ ಬಲಂ ದರ್ಪಂ
ಕಾಮಂ ಕ್ರೋಧಂ ಪರಿಗ್ರಹಮ್ ।
ವಿಮುಚ್ಯ ನಿರ್ಮಮಃ ಶಾಂತೋ
ಬ್ರಹ್ಮಭೂಯಾಯ ಕಲ್ಪತೇ ॥ ೫೩

ಶುದ್ಧಬುದ್ಧಿಯಿಂದ ಕೂಡಿ ಧೃತಿಯಿಂದ ದೇಹೇಂದ್ರಿಯಗಳನ್ನು ಹಿಡಿತದಲ್ಲಿ ಇಟ್ಟುಕೊಂಡು, ಶಬ್ದ ಮೊದಲಾದ ವಿಷಯಗಳನ್ನು ಬಿಟ್ಟು ಪ್ರೀತಿಯನ್ನೂ ಹಗೆತನವನ್ನೂ ಹಿಮ್ಮೆಟ್ಟಿಸಿ, ಜನರ ಗದ್ದಲವಿಲ್ಲದ ಕಡೆ ಇರುತ್ತ, ಮಿತವಾಗಿ ಉಂಡುಕೊಂಡು ಮಾತು, ಶರೀರ, ಮನಸ್ಸು ಈ ಮೂರನ್ನೂ ಹಿಡಿತದಲ್ಲಿಟ್ಟುಕೊಂಡು, ಯಾವಾಗಲೂ ಧ್ಯಾನದಲ್ಲಿ ತೊಡಗಿದವನಾಗಿ ವೈರಾಗ್ಯವನ್ನು ವೈಗೂಡಿಸಿಕೊಂಡು,ಅಹಂಕಾರ, ಸ್ಥಾನಮಾನಗಳ ಬಲ, ಸೊಕ್ಕು, ಬಯಕೆ, ಸಿಟ್ಟು, ಉಪಕರಣಗಳು—ಇವುಗಳನ್ನೆಲ್ಲ ಬಿಟ್ಟು, ತನ್ನದೆಂಬ ಅಭಿಮಾನವಿಲ್ಲದೆ ಸಮಾಧಾನದಿಂದಿರುವವನು ಬ್ರಹ್ಮನನ್ನು ಪಡೆಯಲು ತಕ್ಕವನಾಗಿರುತ್ತಾನೆ.

ಬ್ರಹ್ಮಭೂತಃ ಪ್ರಸನ್ನಾತ್ಮಾ
ನ ಶೋಚತಿ ನ ಕಾಂಕ್ಷತಿ ।
ಸಮಃ ಸರ್ವೇಷು ಭೂತೇಷು
ಮದ್ಭಕ್ತಿಂ ಲಭತೇ ಪರಾಮ್ ॥ ೫೪

ಬ್ರಹ್ಮನಿಷ್ಠನಾದ ಶುದ್ಧಚಿತ್ತನು ದುಃಖಿಸುವುದಿಲ್ಲ; ಬಯಸುವುದಿಲ್ಲ ; ಎಲ್ಲ ಪ್ರಾಣಿಗಳನ್ನೂ ಒಂದೇ ರೀತಿ ಕಾಣುತ್ತ ನನ್ನ ಮೇಲಿನ ಉತ್ಕೃಷ್ಟವಾದ ಪ್ರೇಮಾತಿಶಯವನ್ನು ಹೊಂದುತ್ತಾನೆ.

ಭಕ್ತ್ಯಾ ಮಾಮಭಿಜಾನಾತಿ
ಯಾವಾನ್ ಯಶ್ಚಾಸ್ಮಿ ತತ್ತ್ವತಃ ।
ತತೋ ಮಾಂ ತತ್ತ್ವತೋ ಜ್ಞಾತ್ವಾ
ವಿಶತೇ ತದನಂತರಮ್ ॥ ೫೫

ಆ ಹೆಚ್ಚಿನ ಭಕ್ತಿಯಿಂದ ನಾನು ಎಷ್ಟು, ವಿಸ್ತಾರವಾಗಿರುತ್ತೇನೆಂಬುದನ್ನೂ, ಯಾವ ಸ್ವರೂಪದವನೆಂಬುದನ್ನೂ, ಇದ್ದದಿದ್ದ ಹಾಗೆ ಚೆನ್ನಾಗಿ ತಿಳಿಯುತ್ತಾನೆ. ಆ ಭಕ್ತಿಯಿಂದ ನನ್ನನ್ನು ಇದ್ದದಿದ್ದ ಹಾಗೆ ತಿಳಿದು ಒಡನೆ ನನ್ನೊಳಗೆ ಸೇರಿಹೋಗುತ್ತಾನೆ.

ಸರ್ವಕರ್ಮಾಣ್ಯಪಿ ಸದಾ
ಕುರ್ವಾಣೋ ಮದ್ವ್ಯಪಾಶ್ರಯಃ ।
ಮತ್ಪ್ರಸಾದಾದವಾಪ್ನೋತಿ
ಶಾಶ್ವತಂ ಪದಮವ್ಯಯಮ್ ॥ ೫೬

ಎಲ್ಲ ಕರ್ಮಗಳನ್ನೂ ಯಾವಾಗಲೂ ಮಾಡುವವನಾದರೂ ನನ್ನನ್ನೇ ಗತಿಯೆಂದು ನಂಬಿರುವವನು ನನ್ನ ಅನುಗ್ರಹದಿಂದ ಶಾಶ್ವತವಾದ ಮೋಕ್ಷವನ್ನು ಪಡೆಯುತ್ತಾನೆ.

ಚೇತಸಾ ಸರ್ವಕರ್ಮಾಣಿ
ಮಯಿ ಸಂನ್ಯಸ್ಯ ಮತ್ಪರಃ ।
ಬುದ್ಧಿಯೋಗಮುಪಾಶ್ರಿತ್ಯ
ಮಚ್ಚಿತ್ತಃ ಸತತಂ ಭವ ॥ ೫೭

ಎಲ್ಲ ಕರ್ಮಗಳನ್ನೂ ಮನಸ್ಸಿನಿಂದ ನನಗೆ ಒಪ್ಪಿಸಿ ನನ್ನನ್ನೇ ಗತಿಯೆಂದು ಜ್ಞಾನಯೋಗವನ್ನಾಶ್ರಯಿಸಿ ಯಾವಾಗಲೂ ನನ್ನಲ್ಲಿಯೇ ಮನಸ್ಸನ್ನಿಟ್ಟವನಾಗು.

ಮಚ್ಚಿತ್ತಃ ಸರ್ವದುರ್ಗಾಣಿ
ಮತ್ಪ್ರಸಾದಾತ್ತರಿಷ್ಯಸಿ ।
ಅಥ ಚೇತ್ತ್ವಮಹಂಕಾರಾತ್
ನ ಶ್ರೋಷ್ಯಸಿ ವಿನಂಕ್ಷ್ಯಸಿ ॥ ೫೮

ನನ್ನಲ್ಲಿ ಮನಸ್ಸಿಟ್ಟ ನೀನು ನನ್ನ ಅನುಗ್ರಹದಿಂದ ಎಲ್ಲ ಅನರ್ಥಗಳನ್ನೂ ದಾಟುತ್ತೀ, ಹಾಗಲ್ಲದೆ ನೀನು ದುರಭಿಮಾನದಿಂದ ನನ್ನ ಮಾತನ್ನು ಕೇಳದೆ ಹೋದರೆ ಹಾಳಾಗುತ್ತೀ.

ಯದಹಂಕಾರಮಾಶ್ರಿತ್ಯ
ನ ಯೋತ್ಸ್ಯ ಇತಿ ಮನ್ಯಸೇ ।
ಮಿಥ್ಯೈಷ ವ್ಯವಸಾಯಸ್ತೇ
ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ ॥ ೫೯

ದುರಭಿಮಾನವನ್ನು ತಳೆದು ಯುದ್ಧವನ್ನು ಮಾಡುವುದಿಲ್ಲವೆಂದು ಯೋಚಿಸುತ್ತೀಯಲ್ಲ! ನಿನ್ನ ಈ ನಿಶ್ಚಯವು ಸುಳ್ಳು. ನಿನ್ನ ಹುಟ್ಟುಗುಣವು ನಿನ್ನನ್ನು ಯುದ್ಧಕ್ಕೆ ನೂಕಿಯೇ ನೂಕುತ್ತದೆ.

ಸ್ವಭಾವಜೇನ ಕೌಂತೇಯ
ನಿಬದ್ಧಃ ಸ್ವೇನ ಕರ್ಮಣಾ ।
ಕರ್ತುಂ ನೇಚ್ಛಸಿ ಯನ್ಮೋಹಾತ್
ಕರಿಷ್ಯಸ್ಯವಶೋಽಪಿ ತತ್ ॥ ೬೦

ಅರ್ಜುನ, ನಿನ್ನ ಹುಟ್ಟುಗುಣವಾದ ಕರ್ಮದೊಡನೆ ಗಂಟುಬಿದ್ದಿರುವ ನೀನು ಅವಿವೇಕದಿಂದ ಯಾವುದನ್ನು ಮಾಡುವುದಿಲ್ಲವೆನ್ನುತ್ತೀಯೋ ಅದನ್ನು ನಿನಗರಿವಿಲ್ಲದೆ ಮಾಡಿಬಿಡುತ್ತೀ.

ಈಶ್ವರಃ ಸರ್ವಭೂತಾನಾಂ
ಹೃದ್ದೇಶೇಽರ್ಜುನ ತಿಷ್ಠತಿ ।

ಭ್ರಾಮಯನ್ ಸರ್ವಭೂತಾನಿ
ಯಂತ್ರಾರೂಢಾನಿ ಮಾಯಯಾ ॥ ೬೧

ಅರ್ಜುನ, ಈಶ್ವರನು ಎಲ್ಲ ಪ್ರಾಣಿಗಳನ್ನು ಯಂತ್ರದ ಬೊಂಬೆಗಳನ್ನು ಹೇಗೋ ಹಾಗೆ ಮಾಯೆಯಿಂದ ಸುತ್ತಿಸುತ್ತ ಎಲ್ಲ ಪ್ರಾಣಿಗಳ ಹೃದಯದಲ್ಲಿರುತ್ತಾನೆ.

ತಮೇವ ಶರಣಂ ಗಚ್ಛ
ಸರ್ವಭಾವೇನ ಭಾರತ।
ತತ್ಪ್ರಸಾದಾತ್ ಪರಾಂ ಶಾಂತಿಂ
ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ ॥ ೬೨

ಅರ್ಜುನ, ಎಲ್ಲ ಬಗೆಯಿಂದಲೂ ಅವನನ್ನೇ ಶರಣುಹೋಗು. ಅವನ ಅನುಗ್ರಹದಿಂದ ಪರಮಾನಂದವನ್ನು ಪಡೆವೆ. ಶಾಶ್ವತ ಪದವಿಯನ್ನು ಪಡೆವೆ.

ಇತಿ ತೇ ಜ್ಞಾನಮಾಖ್ಯಾತಂ
ಗುಹ್ಯಾದ್ಗುಹ್ಯತರಂ ಮಯಾ।
ವಿಮೃಶ್ಯೈತದಶೇಷೇಣ
ಯಥೇಚ್ಛಸಿ ತಥಾ ಕುರು ॥ ೬೩

ಹೀಗೆ ನಾನು ನಿನಗೆ ಬಹುಗುಟ್ಟಾದ ತಿಳಿವಳಿಕೆಯನ್ನು ಹೇಳಿರುವೆನು. ಇದನ್ನು ಮೊದಲಿನಿಂದ ಕೊನೆಯವರೆಗೂ ಆಲೋಚನೆ ಮಾಡಿ ಮುಂದೆ ಹೇಗೆ ಮಾಡಬೇಕೆಂದು ಬಯಸುತ್ತೀಯೋ ಹಾಗೆ ಮಾಡು.

ಸರ್ವಗುಹ್ಯತಮಂ ಭೂಯಃ
ಶೃಣು ಮೇ ಪರಮಂ ವಚಃ।
ಇಷ್ಟೋಽಸಿ ಮೇ ದೃಢಮಿತಿ
ತತೋ ವಕ್ಷ್ಯಾಮಿ ತೇ ಹಿತಮ್ ॥ ೬೪

ಎಲ್ಲಕ್ಕಿಂತಲೂ ಹೆಚ್ಚು ಗುಟ್ಟಾದ ಉತ್ತಮವಾದ ಮಾತನ್ನು ಇನ್ನೂ ಕೇಳು. ನೀನು ನನಗೆ ಹೆಚ್ಚಿನ ಗೆಳೆಯನೆಂದು ತಿಳಿದು ಆ ಕಾರಣದಿಂದ ನಿನಗೆ ಒಳ್ಳೆಯದನ್ನು ಹೇಳುತ್ತೇನೆ.

ಮನ್ಮನಾ ಭವ ಮದ್ಭಕ್ತೋ
ಮದ್ಯಾಜೀ ಮಾಂ ನಮಸ್ಕುರು।
ಮಾಮೇವೈಷ್ಯಸಿ ಸತ್ಯಂ ತೇ
ಪ್ರತಿಜಾನೇ ಪ್ರಿಯೋಽಸಿ ಮೇ ॥ ೬೫

ನನ್ನಲ್ಲಿ ಮನಸ್ಸಿಡು. ನನಲ್ಲಿ ಪ್ರೇಮ ಉಳ್ಳವನಾಗು. ನನ್ನನ್ನು ಪೂಜೆಮಾಡು. ನನ್ನನ್ನು ಎರಗು. ನನ್ನನ್ನೇ ಹೊಂದುವೆ. ನೀನು ನನ್ನ ಗೆಳೆಯನೆಂಬುದರ ಮೇಲೆ ನಿನಗೆ ನಿಜವಾಗಿ ಆಣೆ ಮಾಡಿ ಹೇಳುತ್ತೇನೆ.

ಸರ್ವಧರ್ಮಾನ್ ಪರಿತ್ಯಜ್ಯ
ಮಾಮೇಕಂ ಶರಣಂ ವ್ರಜ।
ಅಹಂ ತ್ವಾ ಸರ್ವಪಾಪೇಭ್ಯೋ
ಮೋಕ್ಷಯಿಷ್ಯಾಮಿ ಮಾ ಶುಚಃ ॥ ೬೬

ಎಲ್ಲ ಕರ್ಮಗಳ ಫಲವನ್ನು ಬಿಟ್ಟು ನನ್ನೊಬ್ಬನನ್ನೇ ಶರಣುಹೊಂದು. ನಾನು ನಿನ್ನನ್ನು ಎಲ್ಲ ಪಾಪಗಳಿಂದಲೂ ಬಿಡಿಸುತ್ತೇನೆ. ಚಿಂತಿಸಬೇಡ.

ಇದಂ ತೇ ನಾತಪಸ್ಕಾಯ
ನಾಭಕ್ತಾಯ ಕದಾಚನ।
ನ ಚಾಶುಶ್ರೂಷವೇ ವಾಚ್ಯಂ
ನ ಚ ಮಾಂ ಯೋಽಭ್ಯಸೂಯತಿ ॥ ೬೭

ನಿನಗೆ ಹೇಳಿದ ಇದನ್ನು ತಪಸ್ಸುಇಲ್ಲದವನಿಗೂ ಕೇಳಲು ಇಚ್ಛೆ ಇಲ್ಲದವನಿಗೂ ನನ್ನ ಹಿರಿಮೆಯನ್ನು ಹಳಿಯುವವನಿಗೂ ಎಂದಿಗೂ ಹೇಳಬೇಡ.

ಯ ಇಮಂ ಪರಮಂ ಗುಹ್ಯಂ
ಮದ್ಭಕ್ತೇಷ್ವಭಿಧಾಸ್ಯತಿ।
ಭಕ್ತಿಂ ಮಯಿ ಪರಾಂ ಕೃತ್ವಾ
ಮಾಮೇವೈಷ್ಯತ್ಯಸಂಶಯಃ ॥ ೬೮

ಯಾವನು ಬಹಳ ಹೆಚ್ಚಿನ ಗುಟ್ಟಾದ ಈ ತತ್ತ್ವವನ್ನು ನನ್ನ ಭಕ್ತರಲ್ಲಿ ನೆಲೆಗೊಳಿಸುವನೋ ಅವನು ನನ್ನಲ್ಲಿ ಉತ್ಕೃಷ್ಟವಾದ ಭಕ್ತಿಯನ್ನು ಮಾಡಿ ನನ್ನನ್ನೇ ಪಡೆಯುತ್ತಾನೆ, ಸಂಶಯವಿಲ್ಲ.

ನ ಚ ತಸ್ಮಾನ್ಮನುಷ್ಯೇಷು
ಕಶ್ಚಿನ್ಮೇ ಪ್ರಿಯಕೃತ್ತಮಃ।
ಭವಿತಾ ನ ಚ ಮೇ ತಸ್ಮಾತ್
ಅನ್ಯಃ ಪ್ರಿಯತರೋ ಭುವಿ ॥ ೬೯

ಮನುಷ್ಯರಲ್ಲಿ ಅವನಿಗಿಂತ ನನಗೆ ಹೆಚ್ಚಿನ ಪ್ರಿಯನು ಯಾವನೂ ಇಲ್ಲ. ಅವನಿಗಿಂತ ಬೇರೆ [illegible]

ಅಧ್ಯೇಷ್ಯತೇ ಚ ಯ ಇಮಂ
ಧರ್ಮ್ಯಂ ಸಂವಾದಮಾವಯೋಃ।
ಜ್ಞಾನಯಜ್ಞೇನ ತೇನಾಹಂ
ಇಷ್ಟಃ ಸ್ಯಾಮಿತಿ ಮೇ ಮತಿಃ ॥ ೭೦

ಯಾವನು ನಮ್ಮ ಸಂವಾದವಾದ ಧರ್ಮ್ಯವಾದ ಈ ಮಾತುಗಳನ್ನು ಓದುವನೋ ಅವನಿಂದ ನಾನು ಜ್ಞಾನಯಜ್ಞದಿಂದ ಪೂಜೆಗೊಂಡವನಾಗುವೆನೆಂದು ನನ್ನ ಅಭಿಪ್ರಾಯ.

ಶ್ರದ್ಧಾವಾನನಸೂಯಶ್ಚ
ಶೃಣುಯಾದಪಿ ಯೋ ನರಃ।
ಸೋಽಪಿ ಮುಕ್ತಃ ಶುಭಾನ್ ಲೋಕಾನ್
ಪ್ರಾಪ್ನುಯಾತ್ ಪುಣ್ಯಕರ್ಮಣಾಮ್

ಯಾವ ಮನುಷ್ಯನು ಶ್ರದ್ಧೆಯುಳ್ಳವನಾಗಿ ಅಸೂಯೆಪಡದವನಾಗಿ ಇದನ್ನು ಕೇಳುವನೋ ಅವನೂ ಪಾಪದಿಂದ ಬಿಡುಗಡೆ ಹೊಂದಿ ಪುಣ್ಯವಂತರು ಪಡೆಯುವ ಮಂಗಲಕರಗಳಾದ ಲೋಕಗಳನ್ನು ಪಡೆಯುವನು.

ಕಚ್ಚಿದೇತಚ್ಛ್ರುತಂ ಪಾರ್ಥ
ತ್ವಯೈಕಾಗ್ರೇಣ ಚೇತಸಾ।
ಕಚ್ಚಿದಜ್ಞಾನಸಂಮೋಹಃ
ಪ್ರನಷ್ಟಸ್ತೇ ಧನಂಜಯ ॥ ೭೨

ಅರ್ಜುನ, ಇದನ್ನು ನೀನು ಒಮ್ಮುಖವಾದ ಮನಸ್ಸಿನಿಂದ ಕೇಳಿದೆಯೋ? ನಿನ್ನ ತಪ್ಪು ತಿಳುವಳಿಕೆಯು ಹೋಯಿತಷ್ಟೆ?

ಅರ್ಜುನ ಉವಾಚ—

ನಷ್ಟೋ ಮೋಹಃ ಸ್ಮೃತಿರ್ಲಬ್ಧಾ
ತ್ವತ್ಪ್ರಸಾದಾನ್ಮಯಾಚ್ಯುತ ।
ಸ್ಥಿತೋಽಸ್ಮಿ ಗತಸಂದೇಹಃ
ಕರಿಷ್ಯೇ ವಚನಂ ತವ ॥ ೭೩

ಅರ್ಜುನ : ಕೃಷ್ಣ ! ನನ್ನ ಭ್ರಾಂತಿಯು ಹೋಯಿತು. ನಿನ್ನ ಅನುಗ್ರಹದಿಂದ ನೆನಪು ಬಂತು, ಸಂದೇಹವೆಲ್ಲ ಪರಿಹಾರವಾಯಿತು. ನಿನ್ನ ಮಾತಿನಂತೆ ನಡೆಯುತ್ತೇನೆ.

ಸಂಜಯ ಉವಾಚ—

ಇತ್ಯಹಂ ವಾಸುದೇವಸ್ಯ
ಪಾರ್ಥಸ್ಯ ಚ ಮಹಾತ್ಮನಃ ।
ಸಂವಾದಮಿಮ ಮಶ್ರೌಷಂ
ಅದ್ಭುತಂ ರೋಮಹರ್ಷಣಮ್ ॥ ೭೪

ಸಂಜಯ : ಹೀಗೆ ನಾನು ಕೃಷ್ಣನ ಮತ್ತು ಮಹಾತ್ಮನಾದ ಅರ್ಜುನನ ಆಶ್ಚರ್ಯಕರವೂ ರೋಮಾಂಚನವನ್ನುಂಟು ಮಾಡತಕ್ಕದ್ದೂ ಆದ ಈ ಮಾತುಗಾರಿಕೆಯನ್ನು ಕೇಳಿದೆನು.

ವ್ಯಾಸಪ್ರಸಾದಾಚ್ಛ್ರುತವಾನ್
ಏತತ್ ಗುಹ್ಯತಮಂ ಪರಮ್ ।
ಯೋಗಂ ಯೋಗೇಶ್ವರಾತ್ ಕೃಷ್ಣಾತ್
ಸಾಕ್ಷಾತ್ ಕಥಯತಃ ಸ್ವಯಮ್ ॥ ೭೫

ತಾನೇ ತಾನಾಗಿಯೇ ಹೇಳುತ್ತಿರುವ ಯೋಗೇಶ್ವರನಾದ ಕೃಷ್ಣನ ಬಾಯಿಯಿಂದ ಬಂದ ಈ ಗುಟ್ಟಾದ ಮತ್ತು ಉತ್ಕೃಷ್ಟವಾದ ಯೋಗವನ್ನು ವ್ಯಾಸರ ಅನುಗ್ರಹದಿಂದ ಕೇಳಿದವನಾದೆನು.

ರಾಜನ್; ಸಂಸ್ಮೃತ್ಯ ಸಂಸ್ಮೃತ್ಯ
ಸಂವಾದಮಿಮಮದ್ಭುತಮ್ ।
ಕೇಶವಾರ್ಜುನಯೋಃ ಪುಣ್ಯಂ
ಹೃಷ್ಯಾಮಿ ಚ ಮುಹುರ್ಮುಹುಃ ॥ ೭೬

ಧೃತರಾಷ್ಟ್ರನೆ, ಶ್ರೀಕೃಷ್ಣಾರ್ಜುನರಲ್ಲಿ ನಡೆದ ಈ ಪುಣ್ಯವೂ ಅದ್ಭುತವೂ ಆದ ಮಾತುಗಾರಿಕೆಯನ್ನು ನೆನೆನೆನೆದು ಬಾರಿಬಾರಿಗೂ ಹರ್ಷವನ್ನು ಹೊಂದುತ್ತಿರುವೆನು.

ತಚ್ಚ ಸಂಸ್ಮೃತ್ಯ ಸಂಸ್ಮೃತ್ಯ
ರೂಪಮತ್ಯದ್ಭುತಂ ಹರೇಃ ।
ವಿಸ್ಮಯೋ ಮೇ ಮಹಾನ್ ರಾಜನ್
ಹೃಷ್ಯಾಮಿ ಚ ಪುನಃ ಪುನಃ ॥ ೭೭

ಧೃತರಾಷ್ಟ್ರ; ಶ್ರೀಕೃಷ್ಣನ ಆಶ್ಚರ್ಯಕರವಾದ ವಿಶ್ವರೂಪವನ್ನೂ ನೆನೆದು ನೆನೆದು ನನಗೆ ಹೆಚ್ಚಿನ ಆಶ್ಚರ್ಯವಾಗುತ್ತಿದೆ. ಮತ್ತೆ ಮತ್ತೆ ಹರ್ಷವನ್ನೂ ಹೊಂದುತ್ತಿರುವೆನು.

ಯತ್ರ ಯೋಗೇಶ್ವರಃ ಕೃಷ್ಣೋ
ಯತ್ರ ಪಾರ್ಥೋ ಧನುರ್ಧರಃ ।
ತತ್ರ ಶ್ರೀರ್ವಿಜಯೋ ಭೂತಿಃ
ಧ್ರುವಾ ನೀತಿರ್ಮತಿರ್ಮಮ ॥ ೭೮

ಎಲ್ಲಿ ಯೋಗಸಿದ್ಧಿಗಳೊಡೆಯನಾದ ಕೃಷ್ಣನಿರುವನೋ, ಎಲ್ಲಿ ಗಾಂಡೀವವನ್ನು ಹಿಡಿದ ಅರ್ಜುನ ನಿರುವನೋ, ಅಲ್ಲಿ ರಾಜ್ಯ ಸಂಪತ್ತೂ, ಗೆಲುವೂ, ಏಳಿಗೆಯೂ ಮತ್ತು ನೀತಿಯೂ ಎಂದೆಂದಿಗೂ ನೆಲೆಸಿರುವುವೆಂದು ನನ್ನ ನಿಶ್ಚಯವು

ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ಮೋಕ್ಷಸಂನ್ಯಾಸಯೋಗೋ ನಾಮ ಅಷ್ಟಾದಶೋಽಧ್ಯಾಯಃ

ಇತಿ

೧೮ ನೆಯ ಅಧ್ಯಾಯವು ಮುಗಿದುದು



ಹಾಗಾಗಿ ರೋಗಗ್ರಸ್ತರಿಗೆ ಮಾತ್ರವೇ ಭಗವದ್ಗೀತೆ ಎನ್ನುವುದು ಹಾಸ್ಯಾಸ್ಪದ.

ಭಗವದ್ಗೀತೆಯು ಅಸಮರ್ಥರಿಗಾಗಿಯೇ?— ಈ ಸಮಾಜದಲ್ಲಿರುವ ಕೆಲವು ಅಹಂಕಾರಿಗಳು ಹೇಳುತ್ತಾರೆ. "ಅಯ್ಯೋ! ನನಗೆ ತಿಳುವಳಿಕೆ ಇರುವವರೆಗೂ ದೇವರೂ ಬೇಕಾಗಿಲ್ಲ, ದೈವವೂ ಬೇಡ. ನಾನು ಯಾರ ಮೇಲೂ ಆಧಾರಿತನಾಗಿಲ್ಲ. ನನ್ನ ಕಾಲಮೇಲೆ ನಾನು ನಿಲ್ಲಬಯಸುವೆನು. ನಾನು ಎಂದಿಗೂ ಯಾವ ಕೆಲಸವನ್ನೂ ಸಾಮರ್ಥ್ಯ ರಹಿತನಾಗಿ ಮಾಡುವುದಿಲ್ಲ. ಹೇಗೆ ಇತರರನ್ನು ಬೀಳಿಸಬೇಕೊ, ಹೇಗೆ ಅವರಿಂದ ದುಡ್ಡು ಸಂಪಾದಿಸಬೇಕೋ ನನಗೆ ಚೆನ್ನಾಗಿ ತಿಳಿದಿದೆ. ನನ್ನ ಮೇಲೆ ನನಗೆ ವಿಶ್ವಾಸವಿದೆ. ನಿಮ್ಮ ಭಗವದ್ಗೀತೆಗಳು, ಬ್ರಹ್ಮಪುರಾಣಗಳು ಬುದ್ಧಿ, ತಿಳುವಳಿಕೆಯಿಲ್ಲದವರಿಗೆ ಬೇಕೇ ಹೊರತು ನನಗೇಕೆ?" ಎಂದು. ತಿಳುವಳಿಕೆ ಹೊಂದಿದವನು ಆಡುವ ಮಾತೇ ಇದು? ಅಸಮರ್ಥರಿಗಿಂತ ಹೆಚ್ಚಾಗಿ ಸಮರ್ಥರಿಗೆ ಭಗವದ್ಗೀತೆಯು ಬೇಕು. ಏಕೆಂದರೆ ಒಳ್ಳೆಯ ಕೆಲಸಗಳನ್ನು ಇನ್ನೂ ಒಳ್ಳೆಯ ಸಾಮರ್ಥ್ಯದಿಂದ ಮಾಡುವುದಕ್ಕಾಗಿ. ಅಸಮರ್ಥರು ಭಗವದ್ಗೀತೆಯನ್ನು ಹಿಡಿದು ಏನು ಮಾಡುತ್ತಾರೆ?

ಭಗವದ್ಗೀತೆಯನ್ನು ಎಲ್ಲರೂ ಓದಬಹುದೇ?— ಅತಿವಿನಯ ಸಂಪನ್ನರಾದ ವ್ಯಕ್ತಿಗಳು ಕೆಲವರೆನ್ನುವರು. "ಭಗವದ್ಗೀತೆಯನ್ನು ನನ್ನಂತಹವರೂ ಓದಬಹುದೇ? ಎಲ್ಲರೂ ಓದಬಾರದಂತೆ ಹೌದೇ? ಆ ಪುಸ್ತಕ ಮನೆಯಲ್ಲಿದ್ದರೂ ಒಳ್ಳೆಯದಲ್ಲಾ ಎನ್ನುವರು! ಅದನ್ನು ಯಾರೋ ಕೆಲವರು ಮಾತ್ರ ಮುಟ್ಟಬಹುದಂತೆ. ಅಂತಹುದು ನಮಗೇಕೆ ಬೇಕು. 'ಬಾವಿ ತೋಡಿದರೆ ದೆವ್ವ ಹೊರಬಂದಂತೆ'. ಇಲ್ಲಿಯವರೆವಿಗೂ ಓದದೆ ಈಗ ಓದಿದರೆ ನಮಗೆ ಏನು ಅನರ್ಥವಾಗುವುದೋ" ಎಂದು. ಇದು ಒಂದು ರೀತಿಯ ಮೂರ್ಖವಾದ ಅಥವಾ ಸ್ಪಷ್ಟವಾಗಿ ಹೇಳಬೇಕೆಂದರೆ ಗಡುಸುತನದ ಮಾತು, ವ್ಯಾಧಿ ನಿಮ್ಮಲ್ಲಿ ಇದೆ. ಪೇಟೆಯಲ್ಲಿ ಔಷಧಿ ದೊರೆಯುತ್ತದೆ. ಆಲಸ್ಯ ಮಾಡಿದರೆ ನಷ್ಟ ಔಷಧಿಗೋ? ನಿಮಗೋ?

ಭಗವದ್ಗೀತೆಯನ್ನು ಓದುವುದರಿಂದ ಏನು ಲಾಭ?— ಲಾಭನಷ್ಟಗಳ ಲೆಕ್ಕ ಹಾಕಿ ಬದುಕುವ ಜನ ಎನ್ನುತ್ತಾರೆ– "ಭಗವದ್ಗೀತೆಯನ್ನು ತಪ್ಪದೆ ಓದುತ್ತೇವೆಂದುಕೊಳ್ಳೋಣ; ಅದರಿಂದೇನು ಲಾಭ– ಅದು ಯಾವ ರೂಪದಿಂದ ದೊರೆಯುವುದು? ಮತ್ತೆ ಹಾಗಲ್ಲದಿದ್ದರೆ ನಾವು ಎಷ್ಟು ಸಮಯವನ್ನು ಅದಕ್ಕಾಗಿ ವೆಚ್ಚ ಮಾಡುತ್ತೇವೆ! ತಕ್ಕಷ್ಟು ಲಾಭವಿಲ್ಲದೆ ಯಾವ ಕೆಲಸವನ್ನು ಮಾಡುವುದೂ ನಮಗೆ ಅಭ್ಯಾಸವಿಲ್ಲ" ಎಂದು. ನಿಮಗೆ ಇಂತಹ ದುರಾಲೋಚನೆಗಳು ದೂರವಾಗುವುದೇ ಮೊದಲನೆಯ ಲಾಭ. ಆಮೇಲೆ ನೀವು ಇಲ್ಲಿಯವರೆವಿಗೂ ಎಷ್ಟು ಕಾಲ ವೃಥಾ ಕಳೆದಿರೋ, ಅಜ್ಞಾನದಿಂದ ನಿಜವಾಗಿಯೂ ಎಷ್ಟು ನಷ್ಟಪಟ್ಟಿರೋ ಎಂದು ತಿಳಿಯುವುದು ಎರಡನೆಯ ಲಾಭ. ಲಾಭ ಪಡೆಯಬೇಕೆಂಬ ಹಂಬಲ ಖಂಡಿತವಾಗಿ ನಿಮಗಿದ್ದರೆ ನೀವೇ ಭಗವದ್ಗೀತೆಯನ್ನು ಓದಲು ಅರ್ಹರು.

ನಾವು ಸಮಾಜದಲ್ಲಿ ಇಂತಹ ಕೆಲಸಕ್ಕೆ ಬಾರದ ಪ್ರಶ್ನೆಗಳು, ಇದಕ್ಕಿಂತಲೂ ಹಾಸ್ಯಾಸ್ಪದವಾದವನ್ನು ಎಷ್ಟೋ ಬಾರಿ ಕೇಳುತ್ತಿದ್ದೇವೆ. ಇಂತಹ ಪ್ರಭೃತಿಗಳಲ್ಲಿ ಹೆಚ್ಚು ದಯೆ ತೋರಬೇಕು. ಏಕೆಂದರೆ ಪ್ರಪಂಚದಲ್ಲಿರುವ ಜೀವಿಗಳೆಲ್ಲರಿಗೂ ಭಗವದ್ಗೀತೆಯಿಂದ ಪ್ರಯೋಜನವಿದೆ. ಸೂರ್ಯನು ನನಗೇಕೆ ಬೇಕು ಎನ್ನುವ ಮೂರ್ಖನು ಪ್ರಪಂಚದಲ್ಲಿನ ಯಾವ ದೇಶದಲ್ಲಿಯಾದರೂ ಇರುವನೇ? ಪ್ರಾಣವಾಯುವನ್ನು ತಿರಸ್ಕರಿಸುವ ಜಡನು ಎಲ್ಲಿಯಾದರೂ ಇರುವನೇ? ಪ್ರಪಂಚದಲ್ಲಿರುವ ಸಕಲ ವೇದಾಂತಗಳಿಗೂ ಮೂಲಸೂತ್ರಗಳನ್ನು ಭಗವದ್ಗೀತೆಯಲ್ಲಿ ಹೊಂದಿಸಿರಲು, ಭಾರತೀಯ ವೇದಾಂತದರ್ಶನಸರ್ವಸ್ವವೂ ಭಗವದ್ಗೀತೆಯಲ್ಲಿ ಸಾಕ್ಷಾತ್ಕಾರವಾಗುತ್ತಿರಲು, ಹುಟ್ಟಿದ ಪ್ರತಿಯೊಬ್ಬನಿಗೂ ಸಂಬಂಧಿಸಿದ ಸಮಸ್ಯೆಗಳೇ ಭಗವದ್ಗೀತೆಯಲ್ಲಿ ಚರ್ಚಿಸಿರಲು ಭಗವದ್ಗೀತೆಯು ಎಲ್ಲರಿಗೂ ಬೇಕೇ, ಬೇಡವೇ ಎನ್ನುವ ಮೀಮಾಂಸೆ ಏಕೆ?

ಭೂಮಿಯ ಮೇಲೆ ಜನಿಸಿದ ಪ್ರತಿ ಜೀವಿಗೂ ಭಗವದ್ಗೀತೆ ಬೇಕಾಗಿದೆ. ಮನುಷ್ಯರು ಜ್ಞಾನಪಡೆಯಲು ಅದು ಉಪಯೋಗವಾಗುತ್ತದೆ. ಮಾನವೇತರರಿಗೆ ಅದರಲ್ಲಿನ ಶಬ್ದಗಳು ಕಿವಿಗೆ ಬಿದ್ದ ಮಾತ್ರಕ್ಕೆ ಪಾಪಗಳು ನಶಿಸಿ ಉತ್ತಮ ಜನ್ಮ ಪ್ರಾಪ್ತವಾಗುತ್ತವೆ. ಹಾಗಾಗಿ ಅವನು ಸನ್ಯಾಸಿಯಲ್ಲವೆ. ವೃದ್ಧನಲ್ಲವೆ, ರೋಗಿಯಲ್ಲವೆ ಮಿಗಿಲಾಗಿ ಅಸಮರ್ಥನಲ್ಲವೇ ಎಂದು ಸಂಶಯ ಪಡುವುದು ಬುದ್ಧಿಲೋಪದಿಂದಲೋ ಅಥವಾ ತಿಳಿಯಹೇಳುವವರು ಇಲ್ಲವೆಂತಲೋ ಆಗಿರಬಹುದು. ಕಣ್ಣಿರುವ ಪ್ರತಿಯೊಬ್ಬನಿಗೂ ಬೆಳಕಿನ ಅಗತ್ಯವಿರುವಂತೆ, ಹುಟ್ಟಿದ ಪ್ರತಿಯೊಬ್ಬನಿಗೂ ಸಮಸ್ಯೆಗಳು ಇರುತ್ತವೆಯಾಗಿ ಅವುಗಳನ್ನು ಮೀರಿ ಮೇಲೇರಬೇಕಾದರೆ ತನ್ನಲ್ಲಿರುವ ಲೋಪಗಳನ್ನು ತಿಳಿದುಕೊಳ್ಳಬೇಕಾದ ಅಗತ್ಯವಿರುತ್ತದೆ. ಮೊದಲು ತನ್ನ ಸ್ವರೂಪವನ್ನು ಅರ್ಥಮಾಡಿಕೊಂಡು ತಾನು ಯಾವ ತಪ್ಪು ಮಾಡಿದ್ದರಿಂದ ಸಮಸ್ಯೆಗಳು ಉಂಟಾಗುತ್ತಿವೆ ಎಂಬುದನ್ನು ತಿಳಿದುಕೊಂಡಾಗ ಆ ಸಮಸ್ಯೆಗಳನ್ನು ಸುಲಭವಾಗಿ ಪರಿಷ್ಕರಿಸಿಕೊಳ್ಳಬಹುದು. ಸಮಸ್ಯೆ ತಿಳಿಯದೆ ಹೋದಾಗ ಅದರ ಪರಿಷ್ಕಾರವೂ ಅಸಾಧ್ಯವಾಗುತ್ತದೆ.

ಭಗವದ್ಗೀತೆಯಲ್ಲಿರುವ ಸ್ಪಷ್ಟವಾದ ಕೆಲವು ಸಿದ್ಧಾಂತಗಳು ವೇದಾಂತಿಗಳಿಗೆ ಮಾತ್ರವೇ ಅಲ್ಲದೆ ಸಾಮಾನ್ಯ ಮಾನವನು ಜೀವನದಲ್ಲಿ ಪ್ರತಿದಿನವೂ ಎದುರಿಸುವ ಸಮಸ್ಯೆಗಳಿಗೆ ಸರಿಹೊಂದುವ ಪರಿಷ್ಕಾರಗಳನ್ನು ಒದಗಿಸುತ್ತವೆ. ಮಹಾಪುರುಷರ, ಮಹಾತ್ಮರ ಜೀವನಗಳನ್ನು ಪರಿಶೀಲಿಸಿದರೆ ಕ್ಲಿಷ್ಟ ಸಮಸ್ಯೆಗಳು ಸಂಭವಿಸಿದಾಗ ಅವರು ಭಗವದ್ಗೀತೆಯನ್ನು ಪರಿಹಾರ, ಸಮಾಧಾನಕ್ಕಾಗಿ ತೆಗೆದು ನೋಡಿದಂತೆ ಕಂಡುಬರುತ್ತದೆ. ಮೌಲಿಕವಾಗಿ ಸಮಸ್ಯೆಗಳು ಮನುಷ್ಯರಿಗೆ ಸಮಾನವಾಗಿಯೇ ಇದ್ದು, ಅವು ಎಲ್ಲರಿಗೂ ಪರಿಚಿತವಾದವುಗಳೇ ಆಗಿರುತ್ತವೆ. ಹಾಗಾಗಿ ಭಗವದ್ಗೀತೆಯು ಎಲ್ಲರಿಗೂ ಅಗತ್ಯವೇ ಎಂದು ನಿರ್ಧರಿಸಬಹುದು.

———

# ಕಿಶೋರ ಜಗತ್



# ಗೀತಾರ್ಥಸಾರ

ಖಾಂಡವವನದಹನ ಕಾಲದಲ್ಲಿ ಅಗ್ನಿಯು ತನಗೆ ಅನುಗ್ರಹಿಸಿದ್ದ ರಥವನ್ನೇರಿ ಅರ್ಜುನನು ರಣರಂಗಕ್ಕೆ ಬಂದನು. ಪರಮಪುರುಷನಾದ ಶ್ರೀಕೃಷ್ಣನೇ ಆ ರಥದ ಸಾರಥಿ. ರಥದ ಕುದುರೆಗಳು ಬಿಳಿಯ ಬಣ್ಣದವು. ರಥಧ್ವಜವು ಅರುಣವರ್ಣವನ್ನು ಹೊಂದಿದ್ದಿತು. ಆ ಧ್ವಜದಲ್ಲಿ ಗದಾಧಾರಿಯಾಗಿದ್ದ ಆಂಜನೇಯನು ಉಪಸ್ಥಿತನಿದ್ದನು.

ಎರಡೂ ಸೈನ್ಯಗಳು ಸಜ್ಜಾದ ನಂತರ ಯುದ್ಧಪ್ರಾರಂಭಕ್ಕೆ ಮುಂಚೆ ಭೀಷ್ಮನು ಗಟ್ಟಿಯಾಗಿ ಸಿಂಹನಾದ ಮಾಡಿ ಶಂಖವನ್ನೂದಿದನು. ಅದನ್ನು ಕೇಳಿದ ಕೂಡಲೇ ಕೌರವ ಸೇನೆಯಿಂದ ಸಾವಿರಾರು ಶಂಖಗಳೂ ರಣಭೇರಿಗಳೂ ಪಣವ-ಆನಕ-ಗೋಮುಖಗಳೆಂಬ ರಣವಾದ್ಯಗಳೂ ಮೊಳಗಿಸಲ್ಪಟ್ಟವು.

ಅನಂತರ ಪಾಂಡವ ಸೇನೆಯಲ್ಲಿ ಶ್ರೀಕೃಷ್ಣನು 'ಪಾಂಚಜನ್ಯ'ವನ್ನೂ ಅರ್ಜುನನು 'ದೇವದತ್ತ'ವನ್ನೂ ಯುಧಿಷ್ಠಿರನು 'ಅನಂತವಿಜಯ'ವನ್ನೂ ಭೀಮನು 'ಪೌಂಡ್ರ'ವನ್ನೂ ನಕುಲನು 'ಸುಘೋಷ'ವನ್ನೂ ಸಹದೇವನು 'ಮಣಿಪುಷ್ಪಕ'ವನ್ನೂ ಊದಿದರು. ಧೃಷ್ಟದ್ಯುಮ್ನನೂ ಸಾತ್ಯಕಿಯೂ ಚೇಕಿತಾನನೂ ದ್ರುಪದನೂ ವಿರಾಟನೂ ಅಭಿಮನ್ಯುವೂ ಉಪಪಾಂಡವರೂ ತಮ್ಮ ತಮ್ಮ ಶಂಖಗಳನ್ನೂದಿದರು.

ಯುದ್ಧಮಾಡಲು ಸಿದ್ಧವಾಗಿ ನಿಂತಿರುವ ತನ್ನ ಶತ್ರುಪಕ್ಷದ ಪ್ರಮುಖರನ್ನೊಮ್ಮೆ ನೋಡಬಯಸಿ ಅರ್ಜುನನು ತನ್ನ ರಥವನ್ನು ಮಧ್ಯದಲ್ಲಿ ನಿಲ್ಲಿಸುವಂತೆ ಶ್ರೀಕೃಷ್ಣನಿಗೆ ಹೇಳಿದನು. ಶ್ರೀಕೃಷ್ಣನು ಹಾಗೆಯೇ ಮಾಡಿದನು.

ಅರ್ಜುನನು ಸುತ್ತಲೂ ನೋಡುತ್ತಾನೆ. ಅಲ್ಲಿ ಕಾಣುವವರಾದರೂ ಯಾರು! ತನ್ನ ಅಣ್ಣತಮ್ಮಂದಿರಾದ ದುರ್ಯೋಧನ, ದುಶ್ಶಾಸನಾದಿಗಳು, ತಾತನಾದ ಭೀಷ್ಮ, ಗುರುಗಳಾದ ಕೃಪ-ದ್ರೋಣರು. ಒಡನಾಡಿಯಾದ ಅಶ್ವತ್ಥಾಮನು. ಮಾವನಾದ ಶಲ್ಯ! ಅಬ್ಬಬ್ಬ! ಇವರನ್ನು ಎದುರಿಸಬೇಕೆ! ಇವರನ್ನು ಕೊಂದು ಪಡೆದ ರಾಜ್ಯವನ್ನು ಆಳಬೇಕೆ? ಅಯ್ಯೋ! ಎಂತಹ ಅನ್ಯಾಯ ಮಾಡುತ್ತಿದ್ದೇನೆ ಎಂದು ಸಂಕಟಪಟ್ಟನು. "ಯುದ್ಧ ಮಾಡೆನು" ಎಂದು ಹೇಳಿ ಧನುಸ್ಸನ್ನು ಕೆಳಗೆ ಹಾಕಿ ಸುಮ್ಮನೆ ಕುಳಿತುಬಿಟ್ಟನು.

ಅರ್ಜುನನ ಮಾತುಗಳನ್ನು ಕೇಳಿ ಶ್ರೀಕೃಷ್ಣನಿಗೆ ನಗು ಬಂತು. 'ಎಂತಹ ಪರಾಕ್ರಮಿಗಳೂ ಕೆಲ ಸಮಯದಲ್ಲಿ ಎಷ್ಟು ವಿಚಿತ್ರವಾಗಿ ವರ್ತಿಸುತ್ತಾರಲ್ಲ! ಅರ್ಜುನನು ಹಿಂದೆ ವಿರಾಟನಗರದಲ್ಲಿ ಇದೇ ಕುರುಸೇನೆಯನ್ನು ಎದುರಿಸಿರಲಿಲ್ಲವೆ? ಈಗೇಕೆ ಈ ವ್ಯಾಮೋಹ ಅವನನ್ನು ಆವರಿಸಿದೆ?' ಎಂದುಕೊಂಡ. ಅನಂತರ ಅರ್ಜುನನನ್ನು ಉದ್ದೇಶಿಸಿ ಮಾತನಾಡಲಾರಂಭಿಸಿದ.

"ಅರ್ಜುನ, ನಿನ್ನ ಮಾತುಗಳನ್ನು ಕೇಳಿ ನನಗೆ ಆಶ್ಚರ್ಯವಾಗುತ್ತಿದೆ. ಉತ್ತಮರಿಗೆ ಅಪಕೀರ್ತಿಯನ್ನು ತರುವ ಇಂತಹ ವ್ಯಾಮೋಹ ನಿನಗೇಕೆ ಹುಟ್ಟಿತು? ಧೀರನಾದವನಿಗೆ ಯುದ್ಧದಲ್ಲಿ ಹೋರಾಡುವುದೇ ಭೂಷಣ. ಗೆದ್ದರೆ ರಾಜ್ಯವೈಭವ ಪ್ರಾಪ್ತವಾಗುತ್ತದೆ. ಸೋತು ಮಡಿದರೆ ವೀರಸ್ವರ್ಗ ದೊರಕುತ್ತದೆ.

"ಈಗೊಂದು ವೇಳೆ ನೀನು ಯುದ್ಧದಿಂದ ವಿಮುಖನಾಗಿ ಕುರುಸೇನೆಯನ್ನು ಕೊಲ್ಲದೆ ಬಿಡುತ್ತೀಯೆ ಎಂದುಕೊಳ್ಳೋಣ, ಆಗ ಅವರೆಲ್ಲ ಶಾಶ್ವತವಾಗಿ ಜೀವಿಸಿರುತ್ತಾರೆಯೇ? ಅಥವಾ ನೀನಾದರೂ ಚಿರಂಜೀವಿಯಾಗಿರುತ್ತೀಯಾ? ಉಹ್ಞುಂ. ಖಂಡಿತ ಇಲ್ಲ. ಹುಟ್ಟಿದವನಿಗೆ ಸಾವು ತಪ್ಪದು. ಆದ್ದರಿಂದ ಸಾವಿಗಾಗಿ ಶೋಕಿಸುವುದು ಸರಿಯಲ್ಲ.

"ಸಾವು ಬರುವುದು ನಮ್ಮ ಹೊರದೇಹವಾದ ಶರೀರಕ್ಕೆ ಮಾತ್ರ. ಆದರೆ ಶರೀರದೊಳಗಿರುವ ಆತ್ಮ ಸಾಯುವುದಿಲ್ಲ. ಅದು ಅಮೃತವಾದುದು. ನಾವು ಹಳೆಯ ಬಟ್ಟೆಯನ್ನು ಬಿಟ್ಟು ಹೊಸದನ್ನು ಉಟ್ಟುಕೊಳ್ಳುವಂತೆ, ಆತ್ಮವು ಒಂದು ಶರೀರವನ್ನು ಬಿಟ್ಟು ಮತ್ತೊಂದು ಶರೀರವನ್ನು ಸೇರಿಕೊಳ್ಳುತ್ತದೆ. ಈ ಯುದ್ಧದಲ್ಲಿ ನಿನ್ನ ಬಾಣಗಳಿಂದ ಕೌರವರ ದೇಹಗಳು ಮಾತ್ರ ಅವಸಾನ ಹೊಂದುತ್ತವೆಯೇ ಹೊರತು ಅವರ ಆತ್ಮಗಳಲ್ಲ. ಅವರ ಆತ್ಮಗಳು ಇನ್ನಾವುದೋ ದೇಹಕ್ಕೆ ಚೇತನವಾಗುತ್ತವೆ. ಆದುದರಿಂದಲೇ ದುಃಖದಲ್ಲಿ ಉದ್ವಿಗ್ನರಾಗದ, ಸುಖದಲ್ಲಿ ಆಸಕ್ತಿ ಇಲ್ಲದ, ಕಾಮಕ್ರೋಧಲೋಭಗಳನ್ನು ಬಿಟ್ಟು ಸ್ಥಿತಪ್ರಜ್ಞರೆನಿಸಿಕೊಂಡವರು ಹುಟ್ಟುಸಾವುಗಳಿಗಾಗಿ ಸಂತೋಷಿಸುವುದಾಗಲೀ, ಶೋಕಿಸುವುದಾಗಲೀ ಇಲ್ಲ.

"ಕಿಶೋರ ಭಾರತ"ದಿಂದ

**ಶ್ರೀ ನ್ಯ. ನ. ನಾಗರಾಜ**

ನೀನೂ ಈಗ ಸ್ಥಿತಪ್ರಜ್ಞನಂತೆಯೇ ವರ್ತಿಸು.

"ಅರ್ಜುನ. ಕರ್ಮ – ಎಂದರೆ ಕೆಲಸ, ಬಾಳಿಗೆ ಅಂಟಿಕೊಂಡಿದ್ದು. ಅದನ್ನು ಬಿಡು ವಂತಿಲ್ಲ. ಉಸಿರಾಡುವುದು, ಆಹಾರ ಸೇವಿಸುವುದು, ಮಿತ್ರರೊಂದಿಗೆ ಬೆರೆಯುವುದು ಇವೆಲ್ಲವೂ ಸಹಜವಾದ ಕ್ರಿಯೆಗಳಲ್ಲವೇ? ಇದೇ ರೀತಿಯಲ್ಲೇ ನಿನ್ನ ಕರ್ತವ್ಯವನ್ನೂ ನೀನು ಸಹಜವಾಗಿಯೇ ಮಾಡು. ಯಾವುದೇ ಫಲಾಪೇಕ್ಷೆ ಇಲ್ಲದೆ ನಿನ್ನ ಕರ್ಮವನ್ನು ಆಚರಿಸು. ಕರ್ಮವನ್ನು ಮಾಡಲು ಮಾತ್ರ ನಿನಗೆ ಅಧಿಕಾರ. ಅದರ ಫಲವನ್ನು ಬೇಡಲು ನಿನಗೆ ಅಧಿಕಾರವಿಲ್ಲ. ಆದ್ದರಿಂದ ಫಲದ ಆಸೆಯಿಂದ ಕರ್ಮಮಾಡಬೇಡ ಅಥವಾ ಫಲ ದೊರೆಯುವುದಿಲ್ಲವೆಂದು ಕರ್ಮವನ್ನೇ ಬಿಡಬೇಡ.

"ಆತ್ಮಯೋಗಕ್ಕೂ ಕರ್ಮವೇ ಸಾಧನ ಭಕ್ತಿ, ಜ್ಞಾನ, ಸಂನ್ಯಾಸ, ಇವೆಲ್ಲವೂ ಕರ್ಮದಲ್ಲೇ ಸೇರಿವೆ. ತಾನು ಮಾಡಿದ ಕರ್ಮದ ಫಲವನ್ನು ಚಿಂತಿಸದೇ ಸದಾ ಕರ್ಮನಿರತನಾಗಿರುವವನೇ ವೈರಾಗಿ ಅಥವಾ ಕರ್ಮಯೋಗಿ. ಈ ಯೋಗಿಯು ತಪಸ್ವಿಗಳಿಗಿಂತಲೂ ಶ್ರೇಷ್ಠನಾದನು.

"ಅರ್ಜುನ ನೀನಾಗಲೀ, ನಾನಾಗಲೀ ಅಥವಾ ನಮ್ಮ ಸುತ್ತಲೂ ಇರುವ ಬಂಧು ಮಿತ್ರರಾಗಲೀ, ಈ ಹಿಂದೆ ಇರಲಿಲ್ಲವೆಂದಲ್ಲ ಅಥವಾ ಮುಂದೆ ಮತ್ತೆ ಹುಟ್ಟುವುದಿಲ್ಲವೆಂದೂ ಅಲ್ಲ. ಆದರೆ ನಿನಗೆ ಹಿಂದಿನ ನೆನಪಿಲ್ಲ ಅಷ್ಟೆ. ಹಾಗೆಯೇ ಮುಂದಿನ ಅರಿವೂ ಇಲ್ಲ. ಹುಟ್ಟಿದವನು ಸಾಯುವುದು ಖಂಡಿತ. ಅದೇ ರೀತಿ ಸತ್ತವನು ಮತ್ತೆ ಹುಟ್ಟುವುದೂ ನಿಶ್ಚಿತ.

"ಅರ್ಜುನ, ಈ ಹಿಂದೆ ನಾನು ಅನೇಕ ಅವತಾರಗಳನ್ನು ಎತ್ತಿದ್ದೆ. ಮುಂದೆಯೂ ಸಹ ಬೇರೆ ಬೇರೆ ರೂಪಗಳನ್ನು ತಾಳುತ್ತೇನೆ. ಪ್ರಪಂಚದಲ್ಲಿ ಧರ್ಮವು ಕ್ಷೀಣವಾದಗಲೆಲ್ಲ ನಾನು ಅವತರಿಸಿ, ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ಪರಿಪಾಲಿಸಿ, ಧರ್ಮದ ಪ್ರತಿಷ್ಠಾಪನೆಯನ್ನು ಮಾಡುತ್ತೇನೆ.

"ಪಾರ್ಥ, ಸಮಸ್ತ ಪ್ರಾಣಿಗಳ ಆತ್ಮ ನಾನೇ; ದ್ವಾದಶಾದಿತ್ಯರೂ – ಏಕಾದಶ ರುದ್ರರೂ, ಅಷ್ಟವಸುಗಳೂ, ಯಕ್ಷ-ಗಂಧರ್ವ – ಕಿನ್ನರರೂ, ಮರುದ್ಗಣಗಳೂ, ದೇವತೆಗಳೂ ನಕ್ಷತ್ರಗಳು ಚಂದ್ರ - ಸೂರ್ಯರೂ ನನ್ನಲ್ಲಿಯೇ ಇದ್ದಾರೆ. ದೇವತೆಗಳ ಗುರು ಬೃಹಸ್ಪತಿ, ಸೇನಾಪತಿ ಸ್ಕಂದ, ಭೃಗುಮಹರ್ಷಿ ದೇವರ್ಷಿನಾರದ, ಪ್ರಣವವಾದ 'ಓಂ'ಕಾರ, ಎಲ್ಲವೂ ನಾನೇ. ಪಾಂಡವ. ಕೌರವರನ್ನೂ ಮೊದಲುಗೊಂಡಂತೆ ನನ್ನಲ್ಲಿಲ್ಲದ ಚರಾಚರವಸ್ತುಗಳೇ ಇಲ್ಲ" ಎಂದು ಹೇಳಿ ಶ್ರೀ ಕೃಷ್ಣನು ವಿಶ್ವರೂಪವನ್ನು ತೋರಿದನು.

ಭೂಮಿ – ಆಕಾಶಗಳು ತಾಗುವಷ್ಟು ದೊಡ್ಡದಾಗಿ ಬೆಳೆದ ಶ್ರೀಕೃಷ್ಣನ ಶರೀರದಲ್ಲಿ ಸೂರ್ಯ–ಚಂದ್ರರಾದಿಯಾಗಿ ಸಮಸ್ತ ದೇವತೆಗಳೂ ರಾಕ್ಷಸರೂ ಮನುಷ್ಯರೂ ಪ್ರಾಣಿಗಳೂ ಲೋಕಗಳೂ ನಕ್ಷತ್ರಗಳೂ ಪರ್ವತ–ಸಮುದ್ರ–ನದಿಗಳೂ ಅಡಗಿರುವುದನ್ನು ಅರ್ಜುನನು ಕಂಡನು.

ಅನಂತರ ಶ್ರೀಕೃಷ್ಣನು "ಅರ್ಜುನ, ಮೋಹವನ್ನು ಬಿಡು ಯುದ್ಧ ಮಾಡೇಳು. ನಿನ್ನ ಕರ್ತವ್ಯವನ್ನು ನೆರವೇರಿಸಿ ಸತ್ಕೀರ್ತಿಯನ್ನು ಪಡೆ" ಎಂದನು.

ಶ್ರೀಕೃಷ್ಣನು ಮಾಡಿದ ಉಪದೇಶದಿಂದಲೂ ಅವನು ತೋರಿದ ವಿಶ್ವರೂಪದಿಂದಲೂ ಅರ್ಜುನನು ರೋಮಾಂಚನಗೊಂಡನು. ಅವನು ಶ್ರೀಕೃಷ್ಣನಿಗೆ ನಮಸ್ಕರಿಸಿ "ಸ್ವಾಮಿ, ನನ್ನನ್ನು ಆವರಿಸಿದ್ದ ಮೋಹವು ದೂರವಾಯಿತು. ನೀನು ಹೇಳಿದಂತೆಯೇ ಯುದ್ಧಮಾಡುತ್ತೇನೆ" ಎಂದು ಹೇಳಿ ಯುದ್ಧಸನ್ನದ್ಧನಾದನು.

ಭಗವಂತನಾದ ಶ್ರೀಕೃಷ್ಣನು ಅರ್ಜುನನಿಗೆ ಯುದ್ಧಭೂಮಿಯಲ್ಲಿ ನೀಡಿದ ಉಪದೇಶಾಮೃತವೇ ಭಗವದ್ಗೀತೆ.

★

# ಗೀತಾಮೃತ

ಪ್ರಸ್ಥಾನತ್ರಯದಲ್ಲಿ ಭಗವದ್ಗೀತೆಯು ಅತಿ ಪವಿತ್ರ ಗ್ರಂಥ. ಮಹಾಭಾರತದ ಭೀಷ್ಮ ಪರ್ವದಲ್ಲಿ ಬರುವ ಗೀತೆಯೇ ಶ್ರೀ ಗೀತೆ ಹಾಗೂ ಭಗವದ್ಗೀತೆ. ಗೀತೆಗಳಲ್ಲಿ ಹಲವಾರು ಉಂಟು. ಭ್ರಮರಗೀತೆ, ಹಂಸಗೀತೆ, ಉದ್ಧವಗೀತೆ, ಶಿವಗೀತೆ, ರಾಮಗೀತೆ ಇತ್ಯಾದಿ. "ಮಾನಂ ಪ್ರದೀಪಮಿವ ಕಾರುಣಿಕೋ ದದಾತಿ" ಎಂಬಂತೆ ಶ್ರಿಯಃ ಪತಿಯೂ ಪರಮಕಾರುಣಿಕನೂ ಆದ ಪರಮಪುರುಷನೇ ಸರ್ವಶಾಸ್ತ್ರ ಪ್ರದಾತಾ. ಶಾಸ್ತ್ರಪ್ರದಾನವು ಸದ್ವಾರಕವೆಂದೂ ಅದ್ವಾರಕವೆಂದೂ ಎರಡು ಬಗೆಯಾಗಿ ಕರೆಯುತ್ತಾರೆ ಪರಾಶರ, ವ್ಯಾಸ, ವಾಲ್ಮೀಕಿ ಮುನಿವರರಿಂದ ಆಗಿರುವ ಶಾಸ್ತ್ರ ಪ್ರದಾನವು ಸದ್ವಾರಕವೆಂದೂ ಶ್ರೀಮನ್ನಾರಾಯಣನೇ ಸಾಕ್ಷಾತ್ತಾಗಿ ಅನುಗ್ರಹಿಸಿರುವ ಶಾಸ್ತ್ರವು ಅದ್ವಾರಕವೆಂದೂ ಹೇಳಲ್ಪಡುತ್ತದೆ. ಈ ಶಾಸ್ತ್ರಕ್ಕೆ ಅತಿ ಪ್ರಾಮುಖ್ಯತೆ ನೀಡುತ್ತೇವೆ. ಅಂತಹುದರಲ್ಲಿ ಶ್ರೀಕೃಷ್ಣ ಪರಮಾತ್ಮನಿಂದ ಅನುಗ್ರಹಿಸಲ್ಪಟ್ಟಿರುವ ಶ್ರೀಗೀತಾಶಾಸ್ತ್ರವೇ ಪಾವನಗಳಲ್ಲಿ ಅತಿ ಪಾವನವಾದ ಗ್ರಂಥರತ್ನ.

ಯುದ್ಧದಿಂದ ವಿಮುಖನಾದ ಅರ್ಜುನನಿಗೆ ಯುದ್ಧ ಪ್ರೋತ್ಸಾಹವನ್ನುಂಟು ಮಾಡಲು ಗೀತಾ ಶಾಸ್ತ್ರವನ್ನು ಪರಮಾತ್ಮನು ಉಪದೇಶ ಮಾಡಿದನೆಂಬುವುದು ಕೇವಲ ವ್ಯಾಜಮಾತ್ರ.

> ವೇದೇಷು ಪೌರುಷಂ ಸೂಕ್ತಂ
> ಧರ್ಮಶಾಸ್ತ್ರೇಷು ಮಾನವಮ್ ।
> ಭಾರತೇ ಭಗವದ್ಗೀತಾ
> ಪುರಾಣೇಷು ವೈಷ್ಣವಮ್ ॥

ಎಂಬಂತೆ ಶ್ರುತಿ ಸ್ಮೃತಿ ಪುರಾಣಗಳಲ್ಲಿ ಕ್ರಮಶಃ ಪುರುಷಸೂಕ್ತ, ಮನುಸ್ಮೃತಿ, ಶ್ರೀವಿಷ್ಣು ಪುರಾಣ ಇವುಗಳಂತೆ ಮಹಾಭಾರತದಲ್ಲಿ ಶ್ರೀಗೀತೆಯ ಪ್ರಾಶಸ್ತ್ಯವು ಪ್ರಮಾಣಸಿದ್ಧವು. ಕೇವಲ ದ್ವೈತಾದ್ವೈತ ವಿಶಿಷ್ಟಾದ್ವೈತ ಮತಸ್ಥರೇ ಈ ಗೀತೆಯನ್ನು ಆದರಿಸುತ್ತಿಲ್ಲ. ಪ್ರಪಂಚದಲ್ಲಿ ಎಲ್ಲಾ ದೇಶದವರು ಇದನ್ನು ಓದಿ ಆನಂದಿಸುತ್ತಿದ್ದಾರೆ. ಬೈಬಲ್ ತರುವಾಯ ಎರಡನೆಯ ಸ್ಥಾನದಲ್ಲಿ ಪರಕೀಯ ಭಾಷೆಗಳಿಗೆ ತರ್ಜುಮೆಯಾದ ಅತಿ ಬೇಡಿಕೆಯ ಗ್ರಂಥ ಭಗವದ್ಗೀತೆ. ಗೀತೆಯನ್ನೂ ಎಷ್ಟುಸಲ ಓದಿದರೂ ಮಾನವನಿಗೆ ತೃಪ್ತಿಯಾಗುವುದಿಲ್ಲ. ಎಷ್ಟುಸಲ ಓದಿದರೂ ಅಷ್ಟು ಸಲ ನೂತನವಾದ ಪ್ರಜ್ಞೆ ಮಾನವನಿಗೆ ಲಭಿಸುತ್ತದೆ. ಇಲ್ಲಿ ಯಾವ ಮತವನ್ನೂ ಖಂಡಿಸುವುದಿಲ್ಲ. ಎಲ್ಲಾ ಮಾನವರು

**ಶ್ರೀ ಕಂದಾಡೈ ಕೇಶವನ್**

ಈ ಗೀತಾ ಗಂಗೆಯಲ್ಲಿ ವಿಷಯಗಳಿವೆ. ಗೀತೆಯಲ್ಲಿ ಬರುವ ತತ್ತ್ವಗಳು ಬಹು ವಿಶದ, ವಿಶಾಲ ಗಂಭೀರವಾಗಿವೆ, ಉಪನಿಷತ್ತಿನ ಜ್ಞಾನ, ಧರ್ಮಶಾಸ್ತ್ರಗಳ ಸಾರ, ಪುರಾಣಗಳ ಪವಿತ್ರ ಭಾವನೆ—ಇವು ಎಲ್ಲವರ ಸಂಗಮ ಭಗವದ್ಗೀತೆ. ಸಾವಿರಾರು ವರ್ಷಗಳಿಂದ ಲಕ್ಷಾಂತರ ಜನರು ಭಗವದ್ಗೀತಾ ಪಠನದಿಂದಲೇ ತಮ್ಮ ಜೀವಿತದ ಸಾರ್ಥಕ್ಯವನ್ನು ಕಂಡಿದ್ದಾರೆ. ಶಂಕರಾಚಾರ್ಯರು ವ್ಯಾಖ್ಯಾನ ಮಾಡುವಾಗ,

> ಸಮಸ್ತ ವೇದಾರ್ಥ ಸಾರ ಸಂಗ್ರಹಭೂತಂ ।
> ತದರ್ಥ ವಿಜ್ಞಾನೆ ಸಮಸ್ತ ಪುರುಷಾರ್ಥಸಿದ್ಧಿಃ ॥

ಎಂಬುದಾಗಿ ಹೇಳುತ್ತಾ 'ಗೀತೆಯಲ್ಲಿ ಸಕಲ ವೇದಗಳ ಸಾರವಿದೆ, ಇದನ್ನು ಅರಿತವರಿಗೆ ಧರ್ಮ ಕಾಮ ಮೋಕ್ಷಗಳೆಲ್ಲ ಲಭಿಸುವುದು'. ಎಂಬುದಾಗಿ ಪದೇ ಪದೇ ಹೇಳಿದ್ದಾರೆ. ರಾಮಾನುಜರು ತಮ್ಮ ಭಾಷ್ಯದಲ್ಲಿ 'ಪುರುಷೋತ್ತಮಃ ಸರ್ವೇಶ್ವರೋ ಜಗದುಪಕೃತಿ ಮರ್ತ್ಯ ಆಶ್ರಿತ ವಾತ್ಸಲ್ಯ ವಿವಶಃ ಪಾರ್ಥಂ ರಥಿನಂ ಆತ್ಮಾನಂ ಚ ಸಾರಥಿಂ ಸರ್ವಲೋಕ ಸಾಕ್ಷಿಕಂ ಚಕಾರ' — ಎಂಬುವುದಾಗಿ ಹೇಳುವಾಗ ಭಗವಂತನು ತನ್ನ ಅನೇಕ ಕಲ್ಯಾಣ ಗುಣಗಳನ್ನು ವಿಶೇಷವಾಗಿ ಪ್ರಕಟಿಸಲು ಜಗತ್ತಿಗೆ ಉಪಕಾರ ಮಾಡಲು ತಾನು ಆಶ್ರಿತ ಪರಿಪಾಲಕನು ಎಂಬುವುದನ್ನು ತೋರಿಸಲು ಪಾರ್ಥನು ರಥಾರೂಢನಾಗಲು ತಾನು ಅವನ ಸಾರಥಿಯಾಗಿ ನಿಂತು ಸರ್ವಲೋಕಗಳಿಗೂ ತನ್ನ ಕಲ್ಯಾಣಗುಣಗಳನ್ನು ಪ್ರಕಟಿಸಿದ ಎಂಬುವುದಾಗಿ ಹೇಳಿದ್ದಾರೆ. ಲೋಕ ಕಲ್ಯಾಣಕ್ಕಾಗಿ ಭಗವಂತನ ಅಮೃತವಾದ ಗೀತೆಯಲ್ಲಿ ಹುಟ್ಟಿದೆ.

ಅರ್ಜುನನು ವ್ಯಾಮೋಹಕ್ಕೆ ಸಿಲುಕಿದಾಗ ತನ್ನ ಸುಖಕ್ಕಾಗಿ ಸ್ವಜನರನ್ನು ಕೊಲ್ಲಲಾರೆ, ತಾನು ಯುದ್ಧ ಮಾಡಲಾರೆ ಎಂಬುದಾಗಿ, ತನ್ನ ಕ್ಷತ್ರಿಯಧರ್ಮವನ್ನು ಮರೆತು ಶೋಕದಿಂದ ತಪ್ತನಾಗಿ ಬಿಲ್ಲುಬಾಣಗಳನ್ನು ಬಿಸುಟು ನಿಂತಾಗ, ಮಹಾಶೂರನಾದ ಪಾರ್ಥನು ಕರ್ತವ್ಯ ವಿಮುಖ



ನಾದಾಗ, ಪಾರ್ಥ ಸಾರಥಿ ಕೇವಲ ಅರ್ಜುನನ ರಥವನ್ನು ನಡೆಸುವ ರಥಿಕನಲ್ಲ, ಎಲ್ಲಾ ಮನುಷ್ಯರ ಹಿತವನ್ನು ಕಂಡು ಅವರವರ ಶ್ರೇಯಸ್ಸಿಗೆ ತಕ್ಕಂತೆ ಲಗಾಮು ಹಾಕಿ ಜೀವನ ರಥವನ್ನು ನಡೆಸಬಲ್ಲ ವಿಶ್ವಸಾರಥಿ ಎಂದು ಎಂದೆಂದಿಗೂ ತೋರಿಸಿದ್ದಾನೆ.

ಗೀತೆ ಹೇಳಿದ್ದು ಭಗವಂತ ಶ್ರೀಕೃಷ್ಣ, ಕೇಳಿದ್ದು ಅರ್ಜುನ. ಆದರೆ ವಾಸ್ತವವಾಗಿ ಭಗವದ್ಗೀತೆ ಪ್ರಪಂಚಕ್ಕೆ ಬಂದಿದ್ದು ಹುಟ್ಟುಕುರುಡ ಧೃತರಾಷ್ಟ್ರನಿಂದ. ಯುದ್ಧ ಮಾಡಲು ಕೌರವ ಪಾಂಡವರು ಕುರುಕ್ಷೇತ್ರದಲ್ಲಿ ನಿಂತಾಗ ಅಲ್ಲಿ ಏನು ನಡೆಯಿತು ಹೇಳು ಸಂಜಯ ಎಂಬುವುದಾಗಿ ಧೃತರಾಷ್ಟ್ರನು ಕೇಳಿದಾಗ. ದಿವ್ಯ ಚಕ್ಷುಗಳನ್ನು ಹೊಂದಿದ್ದ ಸಂಜಯನು ನಡೆದ ಎಲ್ಲಾ ಸಂಗತಿಗಳನ್ನು ಯಥಾವತ್ತಾಗಿ ವಿವರಿಸುತ್ತಾನೆ. ಗೀತಾ ಪ್ರಸಂಗವಾದರೊ "ನಿಮಿತ್ತ ಮಾತ್ರಂ ಭವ ಸವ್ಯ ಸಾಚಿನ್" ಎಂಬುವಂತೆ ಅರ್ಜುನನು ನಿಮಿತ್ತ ಮಾತ್ರ, ಭಗವದ್ಗೀತೆ ಸರ್ವಜನ ಹಿತಕ್ಕಾಗಿ ನೀಡಿದ ಮಹಾ ತತ್ತ್ವ. ಎಲ್ಲರ ಜೀವನ ಜಂಜಾಟದಲ್ಲಿ ಸಂದಿಗ್ಧ ಸ್ಥಿತಿಯಲ್ಲಿ ಸಿಕ್ಕಿ ನರಳುತ್ತಿರುವಾಗ ದಾರಿದೀಪವಾಗಿ ನಿಲ್ಲ ಬಲ್ಲಂತಹ ಏಕಮೇವ ತತ್ತ್ವ ಗ್ರಂಥ ಭಗವದ್ಗೀತೆ. ರಾಮಾನುಜರು ವ್ಯಾಖ್ಯಾನ ಮಾಡುವಾಗ ಮೊದಲನೆಯ ಶ್ಲೋಕಕ್ಕೆ ಭಾಷ್ಯ ಬರೆಯುತ್ತಾ,

ಸರ್ವಾತ್ಮನಾಂ ಅಂಧೋ ಧೃತರಾಷ್ಟ್ರಃ
ಸುಯೋಧನ ವಿಜಯ ಬುಭುತ್ಸಯಾ
ಸಂಜಯಂ ಪಪ್ರಚ್ಛ

ಎಂಬುದಾಗಿ ಅವತಾರಿಕೆಯಲ್ಲಿ ಅನುಗ್ರಹಿಸಿದ್ದಾರೆ.

ಹೀಗೆ ಸರ್ವಾತ್ಮನಾ ಅಂಧನಾಗಿದ್ದರೂ ಧೃತರಾಷ್ಟ್ರನಿಗೆ ಮಹತ್ತರವಾದ ಭಾಗ್ಯ ವಿಶೇಷವೊಂದು ಕೂಡಿಬಂತು. ಮೊದಲಿನಿಂದಲೂ ಧೃತರಾಷ್ಟ್ರನು ಹುಟ್ಟುಕುರುಡ ಹಾಗೂ ಹೃದಯದಲ್ಲೂ ಕುರುಡನೇ, ಸ್ವಾರ್ಥಿ. ತನ್ನ ಸಹೋದರನ ಮಕ್ಕಳಿಗೆ ಅವರ ಪಾಲು ಕೊಡಲಿಲ್ಲ. ತನ್ನ ಮಕ್ಕಳ ವ್ಯಾಮೋಹದಿಂದ ಧರ್ಮಚ್ಯುತನಾದ. ಅಧರ್ಮವನ್ನು ತಡೆಯಬಹುದಾಗಿತ್ತು. ಅಂಥಾ ಸಂದರ್ಭದಲ್ಲಿ ಪೂರ್ಣ ಕುರುಡನಾಗಿಯೇ ನಡೆದು ಕೊಂಡವ. ಇಂಥಹವನಿಗೆ ಮಹತ್ತರವಾದ ಭಾಗ್ಯ ವಿಶೇಷವೆಂದರೆ ಪ್ರಪಂಚದಲ್ಲಿ ಗೀತಾಧ್ಯಯನ ಮಾಡುವರೆಲ್ಲರೂ ಪ್ರಾರಂಭದಲ್ಲಿ 'ಧೃತರಾಷ್ಟ್ರ ಉವಾಚ' ಎಂಬುವುದಾಗಿ ಆ ಅಂಧನ ಹೆಸರನ್ನೇ ಹೇಳಿ ಪ್ರಾರಂಭಿಸಬೇಕು. 'ಸಂಜಯಃ ಪೃಚ್ಛ್ಯತೇ ಧೃತರಾಷ್ಟ್ರೇಣ' ಎಂಬುವುದಾಗಿ ಯುಕ್ತವಾದ ವಾಕ್ಯವಿನ್ಯಾಸವು ಆಗಲಿಲ್ಲವಷ್ಟೇ. ಅದ್ದರಿಂದ ಇದೇ ಅವನ ಭಾಗ್ಯವಿಶೇಷವು. ಕಾರಣ ಹಿಂದೆ ಧೃತರಾಷ್ಟ್ರನು ಶ್ರೀಕೃಷ್ಣನ ವಿಶ್ವ ಸ್ವರೂಪವನ್ನು ಕಂಡವ. ಯಾವಾಗಲೂ ಪಾಂಡವರಿಗೆ ಕೃಷ್ಣನು ಏನು ಸಹಾಯ ಮಾಡಿದ ಎಂಬುದನ್ನೇ ಆಲೋಚನೆ ಮಾಡುವ ಸ್ವಭಾವ.

ಧರ್ಮ ಕ್ಷೇತ್ರೇ ಕುರು ಕ್ಷೇತ್ರೇ
ಸಮವೇತಾ ಯುಯುತ್ಸವಃ।
ಮಾಮಕಾಃ ಪಾಂಡವಾ ಶ್ಚೈವ
ಕಿಮ ಕುರ್ವತ ಸಂಜಯ ॥

ಯುದ್ಧ ಭೂಮಿಗೆ ತೆರಳಿದಾಗ ಯುದ್ಧವನ್ನು ತಾನೇ ಮಾಡುವರು. ಅಲ್ಲಿನಡೆದ ಯುದ್ಧದಲ್ಲಿ ಜಯ ಅಪಜಯ ವಿಷಯ ಬಿಟ್ಟು, 'ಕಿಮಕುರ್ವತ' ಎಂಬ ಪ್ರಶ್ನೆಯು ಅನುಚಿತವಲ್ಲವೆ? ಕುರುಕ್ಷೇತ್ರಯುದ್ಧಕ್ಕೆ ಹೋದ ಕೌರವರು ಆ ಧರ್ಮಕ್ಷೇತ್ರ ಮಹಾತ್ಮೆಯಿಂದ ಯುದ್ಧದಿಂದ ವಿಮುಖರಾದರೋ ಎಂಬುವ ಸಂಶಯ ಧೃತರಾಷ್ಟ್ರನಿಗೆ ಬಂದಿರಬೇಕು. ವಿನಾಶಹೇತುಭೂತವಾದ ಅಹಂಕಾರ ಮಮಕಾರಗಳಲ್ಲಿ ಮಮಕಾರವು ಅತಿ ವಿನಾಶ ಹೇತು. ಇಲ್ಲಿ ಧೃತರಾಷ್ಟ್ರನು ಮಮಕಾಃ–ಎಂಬುವುದಕ್ಕೆ ನಮ್ಮವರು ಎಂದು ಹೇಳುವವನು. ಮಮಕಾಃ ಶಬ್ದ ವಿನಾಶಕ್ಕೆ ಸೂಚನೆ.

ಅರ್ಜುನನು ಕೌರವ ಸೈನ್ಯವು ಸಜ್ಜಾಗಿ ನಿಂತಿರುವುದನ್ನು ನೋಡಿ ಹೃಷೀಕೇಶನನ್ನು ಕುರಿತು "ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ" ಎಂಬುದಾಗಿ ಹೇಳಿದಾಗ ಆ ಪರಮಾತ್ಮನು ಎರಡು ಸೈನ್ಯಗಳ ಮಧ್ಯದಲ್ಲಿ ಎಲ್ಲಾ ಮಹಾರಾಜರ ಭೀಷ್ಮ ದ್ರೋಣರ ಮುಂದುಗಡೆಯಲ್ಲಿ ರಥವನ್ನು ನಿಲ್ಲಿಸಿದನು.

"ಶಾಸ್ತಾ ವಿಷ್ಣುಃ ಅಶೇಷ್ಯಸ್ಯ ಜಗತಃ" ಎಂಬಂತೆ ಸರ್ವ ಜಗತ್ತಿನ ಸ್ವಾಮಿ ಬೇರೊಬ್ಬರ ಆಜ್ಞೆ ಪರಿಪಾಲನೆ ಮಾಡಿ ತನ್ನ ಕಲ್ಯಾಣ ಗುಣಗಳನ್ನು ಪ್ರಕಟಿಸಿದ. ವಿಷ್ಣು ಸಹಸ್ರ ನಾಮದಲ್ಲಿ "ವಿಜಿತಾತ್ಮಾ ವಿಧೇಯಾತ್ಮಾ" ಎಂಬುವ ತತ್ತ್ವವನ್ನು ಪರಿಪಾಲಿಸಿದ. ಇಲ್ಲಿ ವಿಧೇಯಾತ್ಮಾ ಅಂದರೆ ತನ್ನ ಭಕ್ತರು ಮಾಡುವ ಆಜ್ಞೆಗಳಿಗೆ ಅನುಸಾರವಾಗಿ ನಡೆಯುವನು. ಪಾರ್ಥನ ಸಾರಥಿಯಾಗುವ ಮುಂಚೆಯೇ ಶ್ರೀಕೃಷ್ಣನು ಪಾಂಡವನ ದೂತನಾಗಿ ಹೋಗಿದ್ದ. ಆದರೆ ಅದು ಫಲಕಾರಿಯಾಗಲಿಲ್ಲ. ಪಾಂಡವರಲ್ಲಿ ಶಕ್ತಿ ಪರಾಕ್ರಮಗಳೇನಾದರೂ ಇದ್ದರೆ ಯುದ್ಧದಲ್ಲಿ ತನ್ನನ್ನು ಗೆಲ್ಲಲಿ ಎಂಬುವುದಾಗಿ ದುರ್ಯೋಧನನು ಹೇಳಿ

ದಾಗ ಯುದ್ಧವು ಅನಿವಾರ್ಯವಾಯಿತು. ಯುದ್ಧ ಪ್ರಾರಂಭವಾಗುವುದಕ್ಕೆ ಮುಂಚೆ ಅರ್ಜುನನೂ ದುರ್ಯೋಧನನೂ ದ್ವಾರಕೆಗೆ ಹೋಗಿ ಶ್ರೀಕೃಷ್ಣನ ಸಹಾಯವನ್ನು ಕೋರಿದರು. ಶ್ರೀಕೃಷ್ಣನು ತನ್ನ ಯಾದವ ಸೈನ್ಯವೆಲ್ಲವೂ ಒಂದು ಕಡೆ ತಾನು ಮಾತ್ರ ಒಂದು ಕಡೆ ಎಂಬುವುದಾಗಿ ಹೇಳಲು ಅರ್ಜುನನು 'ಕೃಷ್ಣಾಶ್ರಯಾಃ ಕೃಷ್ಣಬಲಾಃ ಕೃಷ್ಣನಾಥಾಶ್ಚ ಪಾಂಡವಾಃ' ಎಂಬಂತೆ ಶ್ರೀಕೃಷ್ಣ ಪರಮಾತ್ಮನ ಸಹಾಯವನ್ನು ಮಾತ್ರ ಪ್ರಾರ್ಥಿಸಿದ. ಅಂತೆಯೇ ಶ್ರೀ ಕೃಷ್ಣನು ಪಾರ್ಥನ ಸಾರಥಿಯಾದ, ಹೀಗೆ ಮಹಾ ಉತ್ಸಾಹದಿಂದ ಯುದ್ಧರಂಗಕ್ಕೆ ಬಂದು ಯುದ್ಧವನ್ನು ಮಾಡಲು ದೃಢಾಧ್ಯವಸಾಯವುಳ್ಳ ಅರ್ಜುನನಿಗೆ ಆಕಸ್ಮಿಕವಾಗಿ ಶೋಕ ಮೋಹ ಎಲ್ಲಿ ತಲೆ ದೋರಿತು ಎಂಬುವ ಪ್ರಶ್ನೆ ಬಂದಾಗ; ಅದರ ತತ್ತ್ವವಿವೇಚನೆ ಇಂತಿದೆ–ಪರಮಾತ್ಮ ಹಿಂದಿನ ಅವತಾರದಲ್ಲಿ ದಶರಥಾತ್ಮಜನಾಗಿ ಅವತಾರ ಮಾಡಿದಾಗ 'ದಶವರ್ಷ ಸಹಸ್ರಾಣಿ ದಶವರ್ಷ ಶತಾನಿಚ ಪರ್ಯಂತ ಲೀಲಾ ವಿಭೂತಿ' ಯಲ್ಲಿ ಇದ್ದಾಗ್ಯೂ ಯಾವುದೊಂದು ಅಧ್ಯಾತ್ಮ ಶಾಸ್ತ್ರವನ್ನು ಲೋಕಕ್ಕೆ ನೀಡಲಿಲ್ಲ. ಇದರ ಕೊರತೆ ವ್ಯಥೆ ನಿರ್ವೇದವು ಸ್ವಾಮಿಯ ಮನಸ್ಸಿನಲ್ಲಿ ನೆಲೆಸಿತ್ತು. ಅದರ ಪರಿಹಾರವಾಗಿ ಕೃಷ್ಣಾವತಾರದಲ್ಲಿ ಅರ್ಜುನನಿಗೆ, ಶೋಕ ತಲೆದೋರುವಂತೆ ಮಾಡಿ ಭಗವದ್ಗೀತೆಯಂತಹ ಲೋಕ ಗೀತೆಯನ್ನು ಮಾನವರ ಕಲ್ಯಾಣಕ್ಕಾಗಿ ನೀಡಿದನು.

ಕೇಳತಕ್ಕ ಶಿಷ್ಯನು ಪ್ರಾರ್ಥಿಸದ ಹೊರತು ಅಧ್ಯಾತ್ಮ ಶಾಸ್ತ್ರವನ್ನು ಉಪದೇಶ ಮಾಡುವುದು ಪ್ರತ್ಯವಾಯವೆಂದು, 'ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಂ' ಎಂದು ಪಾರ್ಥನು ಪ್ರಾರ್ಥಿಸುವಂತೆ ಹೃಷೀಕೇಶನು ಇಚ್ಛಿಸಿದನು. ಈ ಬಗೆಯ ಪ್ರಾರ್ಥನೆಯು ನಿರ್ವೇದವಿಲ್ಲದೆ ಉಂಟಾಗುವುದಿಲ್ಲ, ಯಾವ ಮನುಷ್ಯನು ನಿರ್ವಿಣ್ಣ ಮನಸ್ಸುಳ್ಳವನೋ ಅವನೇ ಶಿಷ್ಯನು ಆಗಲು ಅಧಿಕಾರಿಯು ಎಂಬುವುದಾಗಿ ಉಪನಿಷತ್ತುಗಳು ಬೋಧಿಸುತ್ತಿವೆ. "ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾತ್ – ಸ ಗುರು ಮೇವಾಭಿಗಚ್ಛೇತ್ – ಇತ್ಯಾದಿ ಉಪನಿಷದ್ವಾಕ್ಯಗಳು ಪ್ರಮಾಣಗಳು. ಹೀಗೆ ಕೌಂತೇಯನಿಗೆ ಮನೋವ್ಯಾಕುಲತೆ ತಲೆ ದೋರಿದಾಗ ಗೀತೆಯ ಉಪದೇಶ ಆರಂಭವಾಯಿತು. ಯುದ್ಧ ಪ್ರೋತ್ಸಾಹದ ನಿಮಿತ್ತವೇ ಗೀತೆಯ ಉಪದೇಶ ಎಂಬುವುದಾಗಿ ನಾವು ತಿಳಿಯಬಾರದು. ಕ್ಷತ್ರಿಯನಾದವನಿಗೆ ಯುದ್ಧಮಾಡುವುದು ಅವಶ್ಯಕವಾದ ಕರ್ಮವೆಂದು ಹಲವು ಶ್ಲೋಕಗಳಿಂದಲೇ ಅಥವಾ ಒಂದೆರಡು ಅಧ್ಯಾಯ ಪೂರ್ತಿ ಕ್ಷತ್ರಿಯ ಧರ್ಮಗಳನ್ನು ವಿವರಿಸಿ ಅವನನ್ನು ಒಪ್ಪಿಸಿ ಯುದ್ಧವನ್ನು ಮಾಡಿಸ ಬಹುದಾಗಿತ್ತು. ಆದರೆ ಸ್ವಾಮಿ ಮಾನವ ಕಲ್ಯಾಣಕ್ಕಾಗಿ ಹದಿನೆಂಟು ಅಧ್ಯಾಯಾತ್ಮಕವಾದ ಅಧ್ಯಾತ್ಮ ಶಾಸ್ತ್ರವನ್ನು ನೀಡಿದ್ದಾನೆ.

ಗೀತಾ ಶಾಸ್ತ್ರವು ಇಬ್ಬರ ಸಂವಾದ ರೂಪವಾಗಿ ಅವತರಿಸಿದೆ. ಶ್ರೀಗೀತೆಯ ಕೊನೆಯಲ್ಲಿ "ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದಮಾವಯೋಃ" ಎಂಬುದಾಗಿ ಭಗವಂತನೇ ಹೇಳಿರುವುದರಿಂದಲೂ ಪ್ರಾರಂಭದಿಂದ ಕೊನೆಯವರೆಗೂ ಪ್ರಶ್ನೆ ಪ್ರತ್ಯುತ್ತರ ವಿಮರ್ಶಕವಾದ ಶ್ರೀ ಕೃಷ್ಣಾರ್ಜುನರ ಸಂವಾದ ರೂಪಕವಾಗಿ ಗೀತೆ ಸುಗೀತವಾಗಿದೆ, ಧೃತರಾಷ್ಟ್ರನನ್ನು ಕುರಿತು ಸಂಜಯನು "ಇತ್ಯಹಂ ವಾಸುದೇವಸ್ಯ ಪಾರ್ಥಸ್ಯ ಚ ಮಹಾತ್ಮನಃ ಸಂವಾದ ಮಿಮಮಶ್ರೌಷಮದ್ಭುತಂ ರೋಮ ಹರ್ಷಣಂ" ಎಂದು ಹೇಳಿರುವುದರಿಂದ ಧೃತರಾಷ್ಟ್ರ ಸಂಜಯರ ಸಂವಾದವೂ ಹಿತಕರ.

ವ್ಯಾಸ ಪ್ರಸಾದಾತ್ ಶ್ರುತವಾನ್
ಏತ ದ್ಗುಹ್ಯ ಮಹಂ ಪರಮ್ ।
ಯೋಗಂ ಯೋಗೇಶ್ವರಾತ್
ಕೃಷ್ಣಾತ್ ಸಾಕ್ಷಾತ್ ಕಥಯತಃ ಸ್ವಯಮ್ ॥

ಎಂಬುದಾಗಿ ಸಂಜಯನೇ ಸಾಕ್ಷಾತ್ ಹೇಳಿರುವುದರಿಂದಲೂ ವ್ಯಾಸನು ಅನುಗ್ರಹಿಸಲ್ಪಟ್ಟ ದಿವ್ಯ ಚಕ್ಷು ಶ್ರೋತ್ರ ಬಲಗಳಿಂದ ಸಂಜಯನು ಅಶೇಷ ಗೀತಾರ್ಥಗಳನ್ನು ಯಥಾವತ್ತಾಗಿ ಅನುವಾದ ಮಾಡಿ ನಮಗೆ ಉಪಕಾರಮಾಡಿದ್ದಾನೆ. ಸ್ವಾಮಿ ಜಗತ್ತಿನಲ್ಲಿರುವ ಎಲ್ಲಾ ಭಕ್ತರ ಶ್ರೇಯಸ್ಸಿಗಾಗಿಯೇ ಈ ಗೀತಾರ್ಥ ವಿಶೇಷಗಳನ್ನು ಉಪದೇಶಿಸಿದನು, ಗೀತೆಯಲ್ಲಿ ಹೇಳಿರುವ ಅರ್ಥ ವಿಶೇಷಗಳನ್ನು ಮಹಿಮೆಯನ್ನು ಗೀತಾಚಾರ್ಯನಾದ ಭಗವಂತನು ಸ್ವತಃ ತಾನೇ ತನ್ನ ಮಾತಿನಿಂದಲೇ ಅನೇಕ ಸಲ ಪ್ರತಿಪಾದಿಸಿದ್ದಾನೆ.

ಇಮಂ ವಿವಸ್ವತೇ ಯೋಗಂ
ಪ್ರೋಕ್ತವಾನಹಮರ್ಜುನ (4–1)

ಎಂದು ಆರಂಭಿಸಿ

ರಹಸ್ಯಂ ಹ್ಯೇತದುತ್ತಮಮ್ (4–3)

ಅರ್ಜುನ ನಿನಗೆ ನಾನು ಈಗ ಹೇಳಿದ ಶಾಶ್ವತವಾದ ಈ ಕರ್ಮಯೋಗವನ್ನು ಕೇವಲ ನಿನ್ನನ್ನು ಈಗ ಯುದ್ಧಕ್ಕಾಗಿ ಪ್ರೋತ್ಸಾಹಿಸಲು ಹೊಸದಾಗಿ ಈಗ ಕಲ್ಪಿಸಿ ಹೇಳುತ್ತಿದ್ದೇನೆಂದು ತಿಳಿಯಬೇಡ. ಸಕಲ ಜಗತ್ತನ್ನು ಉದ್ಧಾರ ಮಾಡಲು ಪರಮ ಪುರುಷಾರ್ಥ ಲಕ್ಷಣವಾದ ಮೋಕ್ಷಕ್ಕೆ ಸಾಧನವಾಗಿ ಈ ಯೋಗವನ್ನು ಹಿಂದೆಯೇ ಈ ಮನ್ವಂತರದ ಆರಂಭದಲ್ಲಿ ನಾನೇ ಸೂರ್ಯನಿಗೆ ಉಪದೇಶಮಾಡಿದೆ. ಸೂರ್ಯನು ವೈವಸ್ವತ ಮನುವಿಗೆ ಉಪದೇಶಿಸಿದ. ಈ ಮನುವು ಇಕ್ಷ್ವಾಕು ಮಹಾರಾಜನಿಗೆ ಉಪದೇಶಿಸಿದನು. ಈ ವಿಧವಾಗಿ ಸಂಪ್ರದಾಯ ಪರಂಪರೆಯಾಗಿ ಪ್ರಾಪ್ತವಾದ ಈ ಕರ್ಮ ಯೋಗವನ್ನು ಪೂರ್ವದಲ್ಲಿ ಜನಕಾದಿ ರಾಜಋಷಿಗಳು ಉಪದೇಶ ಮೂಲಕವಾಗಿ ಗ್ರಹಿಸಿದರು. ಇಂತಹ ಯೋಗವು ಬಹುಕಾಲದಿಂದ ಶ್ರೋತೃಗಳ ಬುದ್ಧಿ ಮಾಂದ್ಯದಿಂದ ನಷ್ಟ ಪ್ರಾಯವಾಗಿದೆ. ನೀನು ನನ್ನ ಭಕ್ತ, ಸಖ, ನನ್ನಲ್ಲಿ ಪ್ರಪನ್ನನು. ಆದ್ದರಿಂದ ಪ್ರಾಚೀನವಾದ ಈ ಯೋಗವನ್ನು ನಿನಗೆ ತಿಳಿಸುತ್ತೇನೆ ಎಂಬುದಾಗಿ ಸ್ವಾಮಿ ಹೇಳುತ್ತಾನೆ.

ದ್ವಿತೀಯ ಅಧ್ಯಾಯದ ಹನ್ನೆರಡನೆಯ ಶ್ಲೋಕ ಮೊದಲುಗೊಂಡೇ ಶಾಸ್ತ್ರಾರಂಭವು.

ನತ್ವೇವಾಹಂ ಜಾತು ನಾಸಂ
ನ ತ್ವಂ ನೇಮೇ ಜನಾಧಿಪಾಃ ।
ನ ಚೈವ ನ ಭವಿಷ್ಯಾಮಃ
ಸರ್ವೇ ವಯ ಮತಃ ಪರಮ್ ॥

ಸರ್ವೇಶ್ವರನಾದ ನಾನು ಅನಾದಿಯಾಗಿ ಮೊದಲಿನಿಂದಲೂ ಇದ್ದೇನೆ. ನೀನೂ ಅನಾದಿಯಾಗಿ ಇದ್ದೀಯೇ. ಈ ಈಶಿತವ್ಯವಾದ ಕ್ಷೇತ್ರಜ್ಞರೂ ಅನಾದಿಯಾಗಿಯೇ ಇರುವವರು. ಹೀಗೆ ನಾನೂ ನೀನೂ ಇವರೆಲ್ಲರೂ ಮುಂದೆಯೂ ಭವಿಷ್ಯದಲ್ಲೂ ಇರುವವರೇ. ಪರಮಪುರುಷನಾದ ನಾನು ಹೇಗೆ ನಿತ್ಯನೋ ಹಾಗೆಯೇ ಕ್ಷೇತ್ರಜ್ಞರಾದ ನೀವೆಲ್ಲರೂ ನಿತ್ಯರೇ. ಹೀಗೆ ಸರ್ವೇಶ್ವರನಿಗೂ ಆತ್ಮವರ್ಗಕ್ಕೂ ಇರುವ ಭೇದ, ಆತ್ಮಗಳಿಗೆ ಇರುವ ಪರಸ್ಪರ ಭೇದ ಪಾರಮಾರ್ಥಿಕವೆಂದು ಭಗವಂತನೇ ಹೇಳಿರುತ್ತಾನೆ.

ನಾಸತೋ ವಿದ್ಯತೇ ಭಾವೋ
ನಾಭಾವೋವಿದ್ಯತೇ ಸತಃ ।
ಉಭಯೋರಂತಿ ದೃಷ್ಟೋಽಂತಃ
ತ್ವನಯೋ ಸ್ತತ್ವ ದರ್ಶಿಭಿಃ ॥

ಅಸತೋ ದೇಹಸ್ಯ – ಅಂದರೆ ಚೈತನ್ಯ ವಿಲ್ಲದ ದೇಹಕ್ಕೆ, ಭಾವಃ–ಇರುವಿಕೆಯು ನವಿದ್ಯತೇ–ಇಲ್ಲ, ಅಂದರೆ ನಶ್ವರವಾದ ದೇಹಕ್ಕೆ ನಿತ್ಯತ್ವವು ಇಲ್ಲ. ಸ್ಥಿರವಾದ ಈ ಆತ್ಮನಿಗೆ ಅನಿತ್ಯತ್ವವು ಇಲ್ಲ, ಅಚಿದ್ವಸ್ತುವಾದ ದೇಹಕ್ಕೆ ಅಸತ್ತ್ವವೇ ಸ್ವರೂಪವು. ಚೇತನವಾದ ಆತ್ಮಕ್ಕೆ ಸತ್ತ್ವವೇ ಸ್ವರೂಪವು. ಅದು ಅಬಾಧ್ಯವಾದುದು. ನಮ್ಮ ದೇಹಗಳು ಎಂದಾದರೂ ಕೊನೆಗಾಣತಕ್ಕವೇ. ಆತ್ಮವೊಂದೇ

ಅವಿನಾಶಿ. "ಜಾತಸ್ಯ ಹಿ ಧ್ರುವೋ ಮೃತ್ಯುಃ" ಎಂಬುವಂತೆ ಹುಟ್ಟಿದವನು ಸಾಯುವನು, ಸಾಯುವನು ಹುಟ್ಟುತ್ತಾನೆ. ಇದು ನಿತ್ಯ ಸತ್ಯ. ನಾವು ಹಳೆಯ ಬಟ್ಟೆಯನ್ನು ಕಳಚಿ ಹೊಸದನ್ನು ಉಡುವಂತೆ ಜೀವಧಾರಿಯಲ್ಲಿರುವ ಆತ್ಮ ದೇಹವನ್ನು ಬಿಟ್ಟು ಇನ್ನೊಂದು ದೇಹವನ್ನು ಪ್ರವೇಶಿಸುತ್ತದೆ. ಅಂತಹ ಇದನ್ನು ಯಾರೂ ತಪ್ಪಿಸಿ ಕೊಳ್ಳಲಾರರು. ಜನನ ಮರಣಗಳಿಗೆ ದುಃಖ ಪಡುವುದು ಅವಿವೇಕ. ಮಾನವ ತನ್ನ ಧರ್ಮವನ್ನು ಆಚರಿಸಿ ಕೃತಕೃತ್ಯನಾಗಬೇಕು. ನಿತ್ಯನಾದ ಪರಿಣಾಮವಿಲ್ಲದ ಆತ್ಮನಿಗೆ ಅಚೇತನ ಧರ್ಮವಾದ ಜನನ ಮರಣಾದಿಗಳಿಲ್ಲವೆಂದು ತಿಳಿಯತಕ್ಕದ್ದು. ಸ್ವಾಮಿ ಮುಂದಕ್ಕೆ

ಯಾವಾನರ್ಥ ಉದಪಾನೇ
ಸರ್ವತಃ ಸಂಪ್ಲುತೋದಕೇ ।
ತಾವಾನ್ ಸರ್ವೇಷು ವೇದೇಷು
ಬ್ರಾಹ್ಮಣಸ್ಯ ವಿಜಾನತಃ ॥

ಎಂಬುವುದಾಗಿ ಹೇಳುವಾಗ ಅಖಿಲ ಶಾಸ್ತ್ರ ಸಾರಭೂತವಾದ್ದು, ವೇದಾದಿಶಾಸ್ತ್ರಗಳಲ್ಲಿ ಹೇಳಿರುವುದೆಲ್ಲಾ ಎಲ್ಲರಿಗೂ ಉಪಾದೇಯವಾದುದಲ್ಲ. ಜಲಾಶಯದಲ್ಲಿರುವ ಎಲ್ಲಾ ನೀರು ಬಾಯಾರಿಕೆಯಾದವನಿಗೆ ಬೇಕಾಗಿಲ್ಲ. ಎಷ್ಟು ಅವಶ್ಯಕತೆ ಇದೆಯೋ ಅಷ್ಟು ಮಾತ್ರ ಪಾನಕ್ಕೆ ತೆಗೆದುಕೊಳ್ಳಬಲ್ಲ. ನಾವು ಅಂಗಡಿಗೆ ಹೋದಾಗ ನಮಗೆ ಬೇಕಾದ ಪದಾರ್ಥಗಳನ್ನು ಮಾತ್ರ ತೆಗೆದುಕೊಳ್ಳುವಂತೆ ಎಲ್ಲಾ ವೇದಗಳಲ್ಲಿ ವೈದಿಕನಾದ ಮುಮುಕ್ಷುವಿಗೆ ಯಾವುದು ಮೋಕ್ಷ ಸಾಧನವೋ ಅದು ಮಾತ್ರ ಉಪಾದೇಯ, ಮಿಕ್ಕಿದ್ದಲ್ಲ. ಅದರಂತೆ ನೀನು ನಡೆದುಕೊ. ಕರ್ಮ ಮಾಡುವ ಅಧಿಕಾರ ಮಾತ್ರವೇ ನಿನಗೆ ಸೇರಿದ್ದು, ಅದರ ಫಲದ ಅಧಿಕಾರ ನಿನಗಿಲ್ಲ. ಪ್ರಯತ್ನ ನಿನ್ನದು, ಜಯಾಪಜಯ ದೈವಾಧೀನ. ಅರ್ಜುನ ; ಫಲಾಪೇಕ್ಷೆಯು ಸಂಸಾರ ಹೇತು. ಫಲತ್ಯಾಗ ಮೋಕ್ಷಹೇತು. ನಿಷ್ಕಾಮ ಕರ್ಮದಿಂದ ಮುಮುಕ್ಷುವಿಗೆ ಯೋಗದರ್ಶನವಾಗುತ್ತದೆ. ಫಲಾಪೇಕ್ಷೆಯಿಲ್ಲದೆಯೇ ಜೀವಿತವು ಹೇಗೆ ಎಂಬುದವ ಸಂಶಯ ತಲೆದೋರಿದರೆ ನಿನ್ನ ಯೋಗಕ್ಷೇಮದ ಹೊಣೆ ನನ್ನದು. ಏಕೆಂದರೆ ಫಲಾಪೇಕ್ಷೆ ಅಶಾಂತಿಯನ್ನು ವ್ಯಥೆಯನ್ನು ತರುತ್ತದೆ. ಆದ್ದರಿಂದ ಸಮಸ್ತ ಆಸೆಗಳನ್ನು ತೊರೆದು ಯಾರು ನಿಸ್ಪೃಹನಾಗಿ ಅಹಂಕಾರರಹಿತನಾಗಿ ನನ್ನನ್ನು ಸ್ಮರಿಸುವನೋ ಅವನೇ ಸ್ಥಿತ ಪ್ರಜ್ಞನು ಅವನಿಗೆ ನಿಜವಾದ ಶಾಂತಿ ದೊರುಕುತ್ತದೆ. ಜೀವಿತವೆಂಬ ಕುರುಕ್ಷೇತ್ರದಲ್ಲಿ ದಿಕ್ಕುಕಾಣದೆ ತೊಳಲುತ್ತಿರುವ ಮಾನವನಿಗೆ ಮಾಧವನು ಎರಡನೆಯ ಅಧ್ಯಾಯದ ಸಾಂಖ್ಯಯೋಗದಲ್ಲಿ ಆತ್ಮದ ಲಕ್ಷಣ, ಕರ್ಮದ ಲಕ್ಷಣ, ಸ್ವಧರ್ಮ ಪರಿಪಾಲನೆ ಹಾಗೂ ಸ್ಥಿತಪ್ರಜ್ಞನ ಲಕ್ಷಣಗಳನ್ನು ವಿವರವಾಗಿ ತಿಳಿಸುತ್ತಾನೆ. ಮೂರನೆಯ ಅಧ್ಯಾಯದಲ್ಲಿ ಕರ್ಮಯೋಗವನ್ನು ವಿವರಿಸುತ್ತಾ ಅದನ್ನು ತಿಳಿದುಕೊಳ್ಳಲು ಕಷ್ಟ ಎಂಬುವುದಾಗಿ ಸ್ವಾಮಿ ಹೇಳುತ್ತಾ ಅಕರ್ಮವೆಂದರೇನು ಅದಕ್ಕೆ ಸಂಬಂಧಿಸಿದ ಜ್ಞಾನವೆಂತದ್ದು ಎಂದು ವಿವರಿಸುತ್ತಾನೆ ಈ ಸಂದರ್ಭದಲ್ಲಿ ಪಂಡಿತರು ಸಹ ಮೋಹ ಜ್ಞಾನವನ್ನು ಹೊಂದುತ್ತಾರೆ. ಇಲ್ಲಿ ಕರ್ಮ ಅಕರ್ಮ ವಿಕರ್ಮಗಳನ್ನು ಹೇಳುವಾಗ ಅಕರ್ಮಕ್ಕೆ ಕರ್ಮ ಶೂನ್ಯತೆಯೆಂಬ ಅರ್ಥವಲ್ಲ. ಪ್ರಪಂಚದಲ್ಲಿ ಕರ್ಮ ಶೂನ್ಯತಾವಸ್ಥೆಗೆ ಅವಕಾಶವೇ ಇಲ್ಲ. ಶ್ರೀಕೃಷ್ಣ ಪರಮಾತ್ಮನೇ

ನಹಿ ಕಶ್ಚಿತ್ ಕ್ಷಣಮಪಿ
ಜಾತುತಿಷ್ಠತ್ ಅಕರ್ಮಕೃತ್ ।
ಕಾರ್ಯತೇ ಹ್ಯವಶಃ ಕರ್ಮ
ಸರ್ವಃ ಪ್ರಕೃತಿಜೈಃ ಗುಣೈಃ ॥ (3–5)

ಎಂಬುದಾಗಿ ಹೇಳುವಾಗ, ಯಾವ ಮನುಷ್ಯನೂ ಕರ್ಮಗಳನ್ನು ಮಾಡದೆ ಒಂದುಕ್ಷಣ ಕಾಲವಾಗಲೀ ಇರಲು ಸಾಧ್ಯವಿಲ್ಲವೊ ಆತನಿಗೆ ಸಂಬಂಧಿಸಿಕೊಂಡಿರುವ ಪ್ರಕೃತಿಯ ಸ್ವಭಾವವೇ ಕಾರ್ಯವನ್ನು ಮಾಡುವುದು. ಸಮಸ್ತರೂ ಅವರವರ ಸತ್ತ್ವ ರಜಸ್ತಮೋಗುಣಗಳಿಗೆ ಅಧೀನರಾಗಿ ಕೆಲಸಗಳನ್ನು ಮಾಡುತ್ತಲೇ ಇರಬೇಕು.

–( ಸಶೇಷ)

# ಕಪಿಲೇಶ್ವರಸ್ವಾಮಿ ದೇವಾಲಯ

## ತಿರುಪತಿ

ತಿರುಪತಿಯಿಂದ ತಿರುಮಲೆಗೆ ಹೊರಡುವ ಹಾದಿಯಲ್ಲಿ ತಿರುಪತಿಯ ಉತ್ತರ ಭಾಗದಲ್ಲಿ ಬೆಟ್ಟದ ತಪ್ಪಲಿನಲ್ಲಿರುವ ಸುಂದರ ಪ್ರಶಾಂತ ದೇವಾಲಯ. ಇಲ್ಲಿನ ದೊಡ್ಡ ಜಲಪಾತ ಮಳೆಗಾಲದಲ್ಲಿ ತುಂಬಿ ಧುಮುಕುವುದು. ಆಳ್ವಾರ್ ತೀರ್ಥವೆಂದೂ ಹೆಸರಿರುವ ಇಲ್ಲಿ ಕಪಿಲ ಮಹರ್ಷಿ ಪೂಜಿಸಿದ ಈಶ್ವರ ಲಿಂಗವಿದ್ದು ಸಕಲ ಹಿಂದೂಗಳನ್ನೂ ಏಕತ್ರ ಆಕರ್ಷಿಸುತ್ತದೆ. ತಿರುಪತಿಯಿಂದ ನಡೆದೂ ಹೋಗಬಹುದು. ಸ್ಥಳೀಯ ವಾಹನ ಸೌಕರ್ಯವೂ ಉಂಟು.

## ಆಲಯ ಕಾರ್ಯಕ್ರಮ ವಿವರ

| | |
|---|---|
| ಸುಪ್ರಭಾತ | ಬೆಳಗ್ಗೆ 5–00 ರಿಂದ 5–30 ವರೆಗೆ |
| ಸರ್ವದರ್ಶನ | ,, 5–30 ರಿಂದ 9–30 ವರೆಗೆ |
| ಅಭಿಷೇಕ | ,, 9–30 ರಿಂದ 10–30 ವರೆಗೆ |
| ಮೊದಲ ಬಲಿ, ಘಂಟೆ | ,, 10–30 ರಿಂದ 10–45 ವರೆಗೆ |
| ಸರ್ವದರ್ಶನ | ,, 10–45 ರಿಂದ 11–30 ವರೆಗೆ |
| ಎರಡನೇ ಬಲಿ, ಘಂಟೆ | ,, 11–30 ರಿಂದ 11–45 ವರೆಗೆ |
| ಸರ್ವದರ್ಶನ | 11–45 ರಿಂದ ಮಧ್ಯಾಹ್ನ 4–00 ವರೆಗೆ |
| ಅಭಿಷೇಕ (ಆರ್ಜಿತ) | ಮಧ್ಯಾಹ್ನ 4–00 ರಿಂದ 4–30 ವರೆಗೆ |
| ಅರ್ಚನೆ (ಆರ್ಜಿತ) | ,, 4–30 ರಿಂದ 5–30 ವರೆಗೆ |
| ರಾತ್ರಿ ಘಂಟೆ | ಸಂಜೆ 5–30 ರಿಂದ 5–45 ವರೆಗೆ |
| ಸರ್ವದರ್ಶನ | ,, 5–45 ರಿಂದ 6–00 ವರೆಗೆ |
| ದೀಪಾರಾಧನೆ | ,, 6–00 ರಿಂದ 6–30 ವರೆಗೆ |
| ಸರ್ವದರ್ಶನ | ,, 6–30 ರಿಂದ 7–30 ವರೆಗೆ |
| ಏಕಾಂತಸೇವೆ | ರಾತ್ರಿ 7–30 ರಿಂದ 8–00 ವರೆಗೆ |

ಆರ್ಜಿತಸೇವಾಕಾಲದಲ್ಲಿ ರೂ ॥ 1-00 ಶುಲ್ಕದಿಂದ ಒಬ್ಬರು ದರ್ಶನಕ್ಕೆ ಅನುಮತಿಸಲ್ಪಡುವರು.

**ಪೇಷ್ಕಾರ್.**

# ಭಗವದ್ಗೀತೆ

ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ ।
ಗತಾಸೂನಗತಾಸೂಂಶ್ಚ ನಾನುಶೋಚಂತಿ ಪಂಡಿತಾಃ ॥ 2–11

ಅರ್ಜುನ! ಬುದ್ಧಿವಂತರಾದ ಪಂಡಿತರಂತೆ ಧರ್ಮ ಪ್ರಸಂಗವನ್ನು ಆಡುತ್ತಿ. ಯಾರಿಗಾಗಿ ಬಾಧೆ ಪಡಬಾರದೋ ಅವರಿಗಾಗಿ ಬಾಧೆ ಪಡುವೆ. ಸಾಧಾರಣವಾಗಿ ಪಂಡಿತರು ಮರಣಹೊಂದಿದವರನ್ನು ಕುರಿತು ಆಗಲಿ ಬದುಕಿದ್ದವರನ್ನು ಕುರಿತು ಆಗಲಿ ಬಾಧೆಪಡುವುದಿಲ್ಲ.

ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ ।
ತಥಾ ದೇಹಾಂತರಪ್ರಾಪ್ತಿಃ ಧೀರಸ್ತತ್ರ ನ ಮುಹ್ಯತಿ ॥ 2–13

ಪ್ರತಿಯೊಬ್ಬರಿಗೂ ಈ ಶರೀರದಲ್ಲಿ ಪ್ರಥಮವಾಗಿ ಬಾಲ್ಯ ಬರುವುದು, ನಂತರ ಯೌವನ, ನಂತರ ವೃದ್ಧಾಪ್ಯ. ಇದೇ ರೀತಿಯಲ್ಲಿ ಜೀವಾತ್ಮವು ಈ ಶರೀರವನ್ನು ಬಿಟ್ಟು, ಇನ್ನೊಂದು ಶರೀರವನ್ನು ಸೇರುವುದು. ಅದನ್ನೇ ಮರಣ ಎನ್ನುವರು. ವಿವೇಕಿಗಳು ಈ ವಿಷಯದಲ್ಲಿ ಭ್ರಮೆ ಪಡುವುದಿಲ್ಲ.

ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ ।
ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ ॥
2–38

ಸುಖದುಃಖಗಳನ್ನೂ ಲಾಭನಷ್ಟಗಳನ್ನೂ ಜಯಾಪಜಯಗಳನ್ನು ಸಮಾನವಾಗಿ ಭಾವಿಸಿ, ಕರ್ತವ್ಯದೀಕ್ಷನಾಗಿ ಯುದ್ಧ ಮಾಡಲು ಸಿದ್ಧನಾಗು. ಈ ರೀತಿ ಫಲಾಪೇಕ್ಷೆಯನ್ನು ಬಿಟ್ಟು ಯುದ್ಧ ಮಾಡಿದರೆ ನೀನು ಪಾಪವನ್ನು ಹೊಂದುವುಲ್ಲ.

ಕರ್ಮಣ್ಯೇ ವಾಧಿಕಾರಸ್ತೇ ಮಾ ಫಲೇಷು ಕದಾಚನ ।
ಮಾ ಕರ್ಮಫಲಹೇತುರ್ಭೂಃ ಮಾ ತೇ ಸಂಗೋಽಸ್ತ್ವಕರ್ಮಣಿ ॥
2–47

ಫಲ ಬರುವುದೋ ಇಲ್ಲವೋ, ಬಂದರೆ ಏನು ಬರುವುದೋ ಎಂದು ಆಲೋಚನೆ ಇಲ್ಲದೆ, ಕರ್ತವ್ಯವನ್ನು ಸರಿಯಾಗಿ ನಿರ್ವಹಿಸುವುದೇ ನಿನ್ನ ಧರ್ಮ. ಫಲಪ್ರಾಪ್ತಿ ನಿನ್ನ ಕೈಯಲ್ಲಿ ಇಲ್ಲ. ಆದ್ದರಿಂದ ಫಲವನ್ನು ಬಯಸಬೇಡ. ಹಾಗೆಂದು ಕರ್ತವ್ಯವನ್ನು ಬಿಟ್ಟು ಯಾವ ಕಾರ್ಯವನ್ನೂ ಮಾಡದೆ ಸೋಮಾರಿಯಾಗಬೇಡ.

ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ ।
ಕಾರ್ಯತೇ ಹ್ಯವಶಃ ಕರ್ಮ ಸರ್ವಂ ಪ್ರಕೃತಿಜೈರ್ಗುಣೈಃ ॥ 3–5

ಪ್ರತಿಯೊಬ್ಬನೂ ಶರೀರದಿಂದ, ಮಾತಿನಿಂದ, ಮನಸ್ಸಿನಿಂದ ಕಾರ್ಯವನ್ನು ಮಾಡುತ್ತಲೇ ಇರುತ್ತಾನೆ. ಈ ಮೂರರಲ್ಲಿ ಯಾವುದೋ ಒಂದನ್ನು ಮಾಡದೇ ಯಾರೂ ಇರುವುದಿಲ್ಲ. ಪ್ರಕೃತಿ ಗುಣಗಳು ಯಾವುದೋ ಒಂದು ಕೆಲಸವನ್ನು ಮಾನವನಿಂದ ಮಾಡಿಸುತ್ತಲೇ ಇರುತ್ತವೆ.

ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಃ ।
ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥ 3–21

ಉತ್ತಮ ಆದರ್ಶವನ್ನು ಹೊಂದಿದವರು ಏನೇನು ಮಾಡುತ್ತಾರೋ ಅದನ್ನೇ ಇತರ ಜನಗಳು ಅನುಸರಿಸುವರು. ಜೀವನ ವಿಧಾನದಲ್ಲಿ ಅವರು ಏರ್ಪಡಿಸಿಕೊಂಡ ಪ್ರಮಾಣವನ್ನೇ ಜನಸಾಮಾನ್ಯರು ಅನುಸರಿಸುತ್ತಾರೆ.

ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್
ಸ್ವನುಷ್ಠಿತಾತ್ ।
ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥

ಸ್ವಧರ್ಮವು ಕಾಲಕ್ರಮದಲ್ಲಿ ದೋಷದಿಂದ ಕೂಡಿದಂತೆ ಕಾಣಿಸಿದರೂ, ತಾನು ತನ್ನ ಧರ್ಮಕ್ಕಿಂತ ಪರಧರ್ಮವನ್ನು ಚೆನ್ನಾಗಿ ನಿರ್ವಹಿಸಿದರೂ, ಇತರ ಧರ್ಮಕ್ಕಿಂತಲು ತನ್ನ ಧರ್ಮವೇ ಎಲ್ಲಾ ವಿಧದಲ್ಲಿಯು ಒಳ್ಳೆಯದು. ಸ್ವಧರ್ಮವನ್ನು ಅನುಸರಿಸುತ್ತ ಮರಣ ಹೊಂದಿದರೂ ಪರವಾಗಿಲ್ಲ. ಆದರೆ ಪರಧರ್ಮವನ್ನು ಆಚರಿಸುವುದು ಬಹಳ ಭಯಂಕರವಾದದ್ದು.

ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ ತದಾಽತ್ಮಾನಂ ಸೃಜಾಮ್ಯಹಮ್ ॥ 4–7

ಯಾವಾಗ ಧರ್ಮಕ್ಕೆ ಕುಂದು ಬರುವುದೋ, ಅಧರ್ಮಕ್ಕೆ ಏಳಿಕೆಯೋ ಆಗ ನಾನು ಒಂದು ಅವತಾರವನ್ನು ತಾಳುವೆನು.

ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ ।
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇಯುಗೇ ॥ 4–8

ಸಜ್ಜನರ ರಕ್ಷಣೆಗಾಗಿ ಮತ್ತು ದುಷ್ಟರ ಸರ್ವನಾಶಕ್ಕಾಗಿ ಮತ್ತು ಧರ್ಮದ ಸಂಸ್ಥಾಪನೆಗಾಗಿ ಪ್ರತಿಯುಗದಲ್ಲಿ ನಾನು ಅವತಾರ ಎತ್ತುವೆನು.

ಯದೃಚ್ಛಾಲಾಭಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ ।
ಸಮಸ್ಸಿದ್ಧಾವಸಿದ್ಧೌ ಚ ಕೃತ್ವಾಽಪಿ ನ ನಿಬಧ್ಯತೇ ॥ 4–22

ಭಗವಂತನ ಕೃಪೆಯಿಂದ ಆಗಲಿ, ಸುಖದಿಂದ ಆಗಲಿ, ಅಂದುಕೊಳ್ಳದೆ ಲಭಿಸಿದ ಸುಖದಿಂದ ಸಂತೃಪ್ತಿಹೊಂದಿ, ಚಳಿ, ತಾಪ ಮೊದಲಾದುವಕ್ಕೆ ಎಡೆಕೊಡದೆ, ಅಸೂಯೆ ಇಲ್ಲದೆ, ಕಾರ್ಯವಾದರೂ, ಕಾರ್ಯವಾಗದೇ ಹೋದರೂ, ಎಲ್ಲವನ್ನು ಸಮಾನವಾಗಿ ಭಾವಿಸುವವರು ಕರ್ಮವನ್ನು ಮಾಡಿದರೂ ಬಂಧಿಯಾಗುವುದಿಲ್ಲ.

---

ಮೂಲ :
ಡಾ॥ ಎಸ್. ಬಿ. ರಘುನಾಥಾಚಾರ್ಯ
ಅನುವಾದ :
ಡಾ॥ ಕೆ. ಸರ್ವೋತ್ತಮನ್

ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।
ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥ 4–34

ತತ್ತ್ವವನ್ನು ಅರಿತ ಜ್ಞಾನಿಗಳು ಲಭಿಸಿದರೆ ಅವರಿಗೆ ವಿನಯದಿಂದ ನಮಸ್ಕರಿಸಿ, ಕುತೂಹಲದಿಂದ ಪ್ರಶ್ನೆಮಾಡಿ, ಸೇವಿಸಿದರೆ, ತಕ್ಕ ಸಮಯದಲ್ಲಿ ಜ್ಞಾನವನ್ನು ಉಪದೇಶ ಮಾಡುವರು.

ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ ।
ನ ಕರ್ಮಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ ॥

ಭಗವಂತನು ಜೀವಿಗಳಿಗೆ ಕರ್ತೃತ್ವವನ್ನಾಗಲೀ, ಕರ್ಮವನ್ನಾಗಲೀ ಕರ್ಮಫಲದ ಸಂಬಂಧವನ್ನಾಗಲೀ (ಗಂಟು ಬೀಳುವುದು) ಸೃಷ್ಟಿಸಿರುವುದಿಲ್ಲ. ಅವರವರ ಸ್ವಭಾವವನ್ನು ಅನುಸರಿಸಿ ಇವುಗಳು ಏರ್ಪಡುವುವು.

ನಾದತ್ತೇ ಕಸ್ಯಚಿತ್ಪಾಪಂ ನ ಚೈವ ಸುಕೃತಂ ವಿಭುಃ ।
ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯಂತಿ ಜಂತವಃ॥5–15

ದೇವರಿಗೆ ಪಕ್ಷಪಾತವಿಲ್ಲ. ಯಾರ ಪಾಪವನ್ನಾಗಲಿ, ಪುಣ್ಯವನ್ನಾಗಲಿ ತೆಗೆದುಕೊಳ್ಳುವುದಿಲ್ಲ. ಜ್ಞಾನವು ಅಜ್ಞಾನದಿಂದ ಮುಚ್ಚಿರುವುದು. ಆದ್ದರಿಂದ ಪ್ರಾಣಿಗಳೆಲ್ಲ ಮೋಹವನ್ನು ಹೊಂದುವುವು.

ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।
ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ ॥ 5–18

ವಿದ್ಯಾವಿನಯಸಂಪನ್ನನಾದ ಬ್ರಾಹ್ಮಣನಲ್ಲಿ, ಗೋವಿನಲ್ಲಿ, ಆನೆಯಲ್ಲಿ, ನಾಯಿಯಲ್ಲಿ ಮತ್ತು ನಾಯಿ ಮಾಂಸವನ್ನು ತಿನ್ನುವವನಲ್ಲಿಯೂ ಜ್ಞಾನಿಗಳು ಸಮವಾದ ಒಂದೇ ಜೀವಭಾವವನ್ನು ನೋಡುತ್ತಾರೆ.

ನ ಪ್ರಹೃಷ್ಯೇತ್ ಪ್ರಿಯಂ ಪ್ರಾಪ್ಯ
ನೋದ್ವಿಜೇತ್ಪ್ರಾಪ್ಯ ಚಾಪ್ರಿಯಮ್ ।
ಸ್ಥಿರಬುದ್ಧಿರಸಮ್ಮೂಢೋ ಬ್ರಹ್ಮವಿದ್ಬ್ರಹ್ಮಣಿ ಸ್ಥಿತಃ ॥ 5–20

---

ಈಚೆಗೆ ಭಾರತದ ಪ್ರಧಾನ ದಂಡನಾಯಕ ಶ್ರೀ ವೈದ್ಯ ಅವರು ತಿರುಮಲೆಗೆ ಆಗಮಿಸಿದ್ದರು. ಅವರ ಕುಟುಂಬವನ್ನು ಸ್ವಾಗತಿಸುತ್ತಿರುವ ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿರೆಡ್ಡಿ.



ಇಷ್ಟಸಿದ್ಧಿ ಆದವೇಳೆ ಹಿಗ್ಗಕೂಡದು. ಇಷ್ಟ ಸಿದ್ಧಿ ಆಗದಿದ್ದ ವೇಳೆ ಕುಗ್ಗ ಕೂಡದು. ಸ್ಥಿರಬುದ್ಧಿ ಹೊಂದಿ ವಿವೇಕಿಯಾಗಿ ನಿಷ್ಕಾಮಯೋಗದಲ್ಲಿ ಉಳ್ಳವನಾದ ಬ್ರಹ್ಮಜ್ಞಾನಿ ಶಾಂತಿಯಿಂದ ಪರಬ್ರಹ್ಮ ಸ್ಥಿತಿಯಲ್ಲಿಯೇ ಇರುತ್ತಾನೆ.

ಸುಹೃನ್ಮಿತ್ರಾರ್ಯುದಾಸೀನ ಮಧ್ಯಸ್ಥದ್ವೇಷ್ಯಬಂಧುಷು ।
ಸಾಧುಷ್ವಪಿ ಚ ಪಾಪೇಷು ಸಮಬುದ್ಧಿರ್ವಿಶಿಷ್ಯತೇ ॥ 6–9

ಸ್ನೇಹಿತರು, ಸಹೃದಯರು, ಶತ್ರುಗಳು, ಮಧ್ಯಸ್ಥರು, ದ್ವೇಷಿಗಳು, ಬಂಧುಗಳು, ಸಾಧುಗಳು, ಮಹಾಪಾಪಿಗಳು – ಇವರೆಲ್ಲರಲ್ಲಿ ಒಂದೇ ರೀತಿ ಸಮಬುದ್ಧಿಯುಳ್ಳವರು ಉತ್ತಮರು.

ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ ।
ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ ಮತಃ ॥
6–32

ಯಾರು, ಎಲ್ಲ ಪ್ರಾಣಿಗಳ ಸುಖ ದುಃಖಗಳನ್ನು ತನ್ನಂತೆಯೇ ಭಾವಿಸಿ ಸಹಾಯ ಮಾಡುತ್ತ ಒಂದೇರೀತಿ ನೋಡುತ್ತಾರೋ ಅವರು ಭಗವಂತನಿಗೆ ಪ್ರೀತಿಪಾತ್ರರು.

ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ ಧೃಢಮ್ ।
ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್ ॥6-34

ಕೃಷ್ಣ ! ಮನಸ್ಸು ಚಂಚಲವಾದದ್ದು. ಜನ್ಮಾಂತರದ ಸಂಸ್ಕಾರದಿಂದ ದೃಢವಾದದ್ದು. ಅದರನ್ನು ನಿಗ್ರಹಿಸುವುದು ಬಿರುಗಾಳಿಯನ್ನು ಕಟ್ಟಿಹಾಕಿದಂತೆ ಕಷ್ಟವಾದ ಕೆಲಸ.

ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।
ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥ 7–3

ಸಾವಿರ ಮನುಷ್ಯರಲ್ಲಿ ಯಾವನೋ ಒಬ್ಬನು ಜನ್ಮಾಂತರ ಸಂಸ್ಕಾರದಿಂದ ಸಿದ್ಧಿಗಾಗಿ ಪ್ರಯತ್ನಿಸುತ್ತಾನೆ. ಹಾಗೆ ಸಾಧನೆ ಮಾಡುವವರಲ್ಲಿ ಯಾವನೋ ಒಬ್ಬನು ಭಗವಂತನ ಸ್ವರೂಪವನ್ನು ಸರಿಯಾಗಿ ಅರ್ಥಮಾಡಿಕೊಳ್ಳುತ್ತಾನೆ.

ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯಂತೇ ನರಾಧಮಾಃ ।
ಮಾಯಯಾಽಪಹೃತಜ್ಞಾನಾ ಆಸುರಂ ಭಾವಮಾಶ್ರಿತಾಃ॥7–15

ದುಷ್ಕರ್ಮಗಳನ್ನು ಮಾಡುತ್ತಾ ಅಜ್ಞಾನಿಗಳಾದ ನೀಚರು, ಸತ್ತ್ವ, ರಜಸ್ಸು, ತಮೋಗುಣ ರೂಪವಾದ ಮಾಯೆಯಿಂದ ಜ್ಞಾನವನ್ನು ಕಳೆದುಕೊಳ್ಳುವರು. ಅವರ ಭಾವನೆ, ನಡೆ ನುಡಿ ರಾಕ್ಷಸ ಭಾವವನ್ನು ಹೊಂದುವುವು. ಅವರು ನನ್ನನ್ನು ಆಶ್ರಯಿಸುವುದಿಲ್ಲ ಮತ್ತು ನನ್ನನ್ನು ಪಡೆಯುವುದಿಲ್ಲ.

ಯೋ ಯೋ ಯಾಂ ಯಾಂ ತನುಂ ಭಕ್ತಃ
ಶ್ರದ್ಧಯಾರ್ಚಿತುಮಿಚ್ಛತಿ ।
ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಮ್ ॥
7–21

ಯಾವ ಯಾವ ಭಕ್ತನು ಯಾವ ಯಾವ ಇಷ್ಟದೇವತಾಮೂರ್ತಿಯನ್ನು ಶ್ರದ್ಧೆಯಿಂದ ಆರಾಧಿಸಬೇಕೆಂದು ಇಚ್ಛಿಸುವನೋ ಅವನವನಿಗೆ ಆಯಾ ದೇವತಾಮೂರ್ತಿಗಳ ಮೇಲೆ ಸ್ಥಿರವಾದ ಶ್ರದ್ಧೆಯನ್ನು ನಾನು ಉಂಟುಮಾಡುತ್ತೇನೆ.

ಯಂ ಯಂ ವಾಽಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಲೇಬರಮ್ ।
ತಂ ತಮೇವೈತಿ ಕೌಂತೇಯ ! ಸದಾ ತದ್ಭಾವಭಾವಿತಃ ॥ 8-6

ಅರ್ಜುನ! ಮರಣಕಾಲದಲ್ಲಿ ಈ ಶರೀರವನ್ನು ಬಿಡುವಾಗ, ಯಾವನು ಯಾವ ಯಾವ ಭಾವವನ್ನು ಸ್ಮರಿಸುತ್ತಾನೋ, ಅವನು ಯಾವಾಗಲೂ ಅದನ್ನೇ ಭಾವಿಸಿ ಮರುಜನ್ಮನಲ್ಲಿ ಅದೇ ರೂಪವನ್ನು ಹೊಂದುವನು.

ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।
ತೇಷಾಂ ನಿತ್ಯಾಭಿಯುಕ್ತಾನಾಂ
ಯೋಗಕ್ಷೇಮಂ ವಹಾಮ್ಯಹಮ್ ॥ 9-22

ಯಾವ ಜನ ಅನನ್ಯ ಮನಸ್ಸಿನಿಂದ ನನ್ನನ್ನು ಧ್ಯಾನಮಾಡಿ ಉಪಾಸನೆ ಮಾಡುವರೋ, ನಿರಂತರ ಯೋಗನಿಷ್ಠರಾದ ಅವರ ಯೋಗಕ್ಷೇಮವನ್ನು ನಾನೇ ಹೊರುತ್ತೇನೆ.

ಪತ್ರಂ ಪುಷ್ಪಂ ಫಲಂ ತೋಯಂ
ಯೋ ಮೇ ಭಕ್ತ್ಯಾ ಪ್ರಯಚ್ಛತಿ ।
ತದಹಂ ಭಕ್ತ್ಯುಪಹೃತಂ ಅಶ್ನಾಮಿ ಪ್ರಯತಾತ್ಮನಃ ॥ 9-26

ಒಳ್ಳೆಯ ಮನಸ್ಸಿನಿಂದ, ಭಕ್ತಿಯಿಂದ ಎಲೆಯನ್ನಾಗಲಿ, ಹೂವನ್ನಾಗಲಿ, ಹಣ್ಣನ್ನಾಗಲಿ, ನೀರನ್ನಾಗಲಿ ನನಗೆ ಯಾರಾದರೂ ಅರ್ಪಿಸಿದರೆ ನಾನು ಅದನ್ನು ಸ್ವೀಕರಿಸುತ್ತೇನೆ.

ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।
ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಮ್ ॥ 9-27

ಅರ್ಜುನ ! ನೀನು ನಿನಗಾಗಿ ಯಾವುದನ್ನು ಮಾಡುತ್ತೀಯೋ, ಯಾವುದನ್ನು ಉಣ್ಣುತ್ತೀಯೋ, ಯಾವುದನ್ನು ಹೋಮ ಮಾಡುತ್ತೀಯೋ, ಯಾವುದನ್ನು ದಾನಮಾಡುತ್ತೀಯೋ, ಯಾವ ತಪಸ್ಸನ್ನು ಮಾಡುತ್ತೀಯೋ ಅವೆಲ್ಲವನ್ನು ಭಕ್ತಿಯಿಂದ ನನಗೆ ಒಪ್ಪಿಸಿಬಿಡು.

ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ ।
ಯೇ ಭಜಂತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು
ಚಾಪ್ಯಹಮ್ ॥ 9-29

ನಾನು ಸಮಸ್ತ ಭೂತಗಳಲ್ಲಿ ಸಮಾನನಾಗಿರುತ್ತೇನೆ. ನನಗೆ ಶತ್ರುವೂ ಇಲ್ಲ. ಮಿತ್ರನೂ ಇಲ್ಲ. ಯಾರು ನನ್ನನ್ನು ಭಕ್ತಿಯಿಂದ ಸೇವಿಸುವರೋ ಅವರು ನನ್ನಲ್ಲಿ ಇರುತ್ತಾರೆ. ನಾನು ಕೂಡ ಅವರಲ್ಲಿ ಇರುತ್ತೇನೆ.

ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ ।
ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ ॥ 9-30

ಹಿಂದೆ ಎಷ್ಟು ದುರ್ಮಾರ್ಗನಾದರೂ ಅನನ್ಯ ಭಕ್ತಿಯಿಂದ ಸೇವೆ ಮಾಡಿದವನನ್ನು ಸಾಧುವೆಂದು ಪರಿಗಣಿಸಬೇಕು. ಏಕೆಂದರೆ ಅವನು ತಪ್ಪನ್ನು ತಿದ್ದಿಕೊಂಡು ಸರಿಯಾದ ಮಾರ್ಗದಲ್ಲಿ ನಡೆಯುವುದಕ್ಕೆ ಆರಂಭಿಸುವನು.

ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।
ಮಾಮೇವೈಷ್ಯಸಿ ಯುಕ್ತ್ವೈವಮ್ ಆತ್ಮಾನಂ ಮತ್ಪರಾಯಣಃ ॥
9-34

ಅನನ್ಯ ಭಕ್ತಿ ಹೊಂದಬೇಕಾದರೆ ಯಾವ ಕಾರ್ಯಮಾಡಿದರೂ ನಿನ್ನ ಮನಸ್ಸನ್ನು ನನ್ನಲ್ಲಿ ನಿಲ್ಲಿಸು. ನನ್ನಲ್ಲಿಯೇ ಯಾವಾಗಲೂ ಭಕ್ತಿಯಿಂದ ಇರು. ನನ್ನನ್ನು ನಾನಾವಿಧದಲ್ಲಿ ಆರಾಧಿಸು. ನನ್ನಲ್ಲಿ ಶರಣು ಹೊಂದು – ಈ ರೀತಿಯಲ್ಲಿ ಮನಸ್ಸನ್ನು ಅಂಕಿತಮಾಡಿದರೆ ಕೊನೆಗೆ ನನ್ನನ್ನು ಸೇರುವೆ.

ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ ।
ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶಸಂಭವಮ್ ॥
10-41

ಜಗತ್ತಿನಲ್ಲಿ ಕೆಲವು ವಸ್ತುಗಳಲ್ಲಿ ಕಾಣುವ ಅಸಾಧಾರಣ ತೇಜಸ್ಸು, ಶೋಭೆ, ಶಕ್ತಿ, ಸಾಮರ್ಥ್ಯ – ಇವೆಲ್ಲವೂ ನನ್ನ ತೇಜಸ್ಸಿನ ಅಂಶದಿಂದ ಹುಟ್ಟಿದವೆಂದು ಚೆನ್ನಾಗಿ ತಿಳಿದುಕೊ!

ಭಕ್ತ್ಯಾ ತ್ವನನ್ಯಯಾ ಶಕ್ಯಃ ಅಹ ಮೇವಂವಿಧೋಽರ್ಜುನ ।
ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥
11-54

ಅರ್ಜುನ! ನನ್ನನ್ನು ಯಥಾರ್ಥವಾಗಿ ತಿಳಿದುಕೊಳ್ಳಬೇಕಾದರೆ, ದರ್ಶನ ಮಾಡಬೇಕಾದರೆ, ಕೊನೆಗೆ ನನ್ನಲ್ಲಿ ಸೇರಬೇಕಾದರೆ ಅನನ್ಯ ಭಕ್ತಿಯಿಂದ ಮಾತ್ರವೇ ಸಾಧ್ಯವಾಗುತ್ತದೆ.

ಯಸ್ಮಾನ್ನೋದ್ವಿಜತೇ ಲೋಕಃ ಲೋಕಾನ್ನೋದ್ವಿಜತೇ ಚ ಯಃ ।
ಹರ್ಷಾಮರ್ಷಭಯೋದ್ವೇಗೈಃ ಮುಕ್ತೋ ಯಃ ಸ ಚ ಮೇ
ಪ್ರಿಯಃ ॥ 12-15

ಕಾಮ, ಕ್ರೋಧ, ಲೋಭ, ಮೋಹ, ಮದಮಾತ್ಸರ್ಯ ಎನ್ನುವ ಅಂತಶ್ಶತ್ರುಗಳನ್ನು ಜಯಿಸಿದ ಕಾರಣವಾಗಿ, ಯಾರಿಂದ ಲೋಕ ಭಯಪಡುವುದಿಲ್ಲವೋ, ಯಾರು ಲೋಕವನ್ನು ನೋಡಿ ಭಯಪಡುವುದಿಲ್ಲವೋ, ಸುಖ ದುಃಖಗಳು, ಭಯ ಉದ್ವೇಗಗಳು ಯಾರ ಮೇಲೆ ಯಾವ ವಿಧವಾದ ಪ್ರಭಾವವನ್ನೂ ಉಂಟಾಗಿಸುವುದಿಲ್ಲವೋ ಅಂತಹವನು ನನಗೆ ಪ್ರಿಯನಾದ ಭಕ್ತನು.

---

ಶ್ರೀ ವೈದ್ಯ ದಂಪತಿಗಳಿಗೆ ಸ್ವಾಮಿ ಪ್ರಸಾದಗಳನ್ನು ನೀಡುತ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿರೆಡ್ಡಿ.



ತುಲ್ಯನಿಂದಾಸ್ತುತಿರ್ಮೌನೀ ಸಂತುಷ್ಟೋ ಯೇನ ಕೇನಚಿತ್ ।
ಅನಿಕೇತಃ ಸ್ಥಿರಮತಿಃ ಭಕ್ತಿಮಾನ್ಮೇ ಪ್ರಿಯೋ ನರಃ ॥ 12-19

ಯಾರಿಗೆ ಸ್ತುತಿನಿಂದೆಗಳು ಸಮಾನವೋ, ಮೌನವಾಗಿ ಇದ್ದು ಯತ್ಕಿಂಚಿತ್ ಲಾಭದಲ್ಲಿ ಯಾರು ಸಂತೃಪ್ತಿ ಪಡುವರೋ, ಯಾರು ನಿರ್ದಿಷ್ಟಸ್ಥಾನವಿಲ್ಲದೆ ಯಾವುದರ ಮೇಲೂ ಇದು ನನ್ನದು ಎನ್ನುವ ಮಮಕಾರ ಇಲ್ಲದವರೊ, ಅವರು ನನಗೆ ಬಹಳ ಪ್ರಿಯವಾದವರು.

ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಮ್ ।
ವಿನಶ್ಯತ್ಸ್ವವಿನಶ್ಯಂತಂ ಯಃ ಪಶ್ಯತಿ ಸ ಪಶ್ಯತಿ ॥ 13-28

ನಾಶಹೊಂದುವ ಸ್ವಭಾವಹೊಂದಿದ ಸಕಲ ಚರಾಚರ ಪ್ರಪಂಚದಲ್ಲಿ, ವಿನಾಶ ಹೊಂದದೆ ಅಂತರಾತ್ಮ ರೂಪದಲ್ಲಿ ಸಮಾನನಾಗಿರುವ ಪರಮೇಶ್ವರನನ್ನು ಯಾರು ನೋಡುತ್ತಾರೋ ಅವರೇ ಸರಿಯಾದ ದೃಷ್ಟಿಯುಳ್ಳವರು.

ಸಮಂ ಪಶ್ಯನ್ ಹಿ ಸರ್ವತ್ರ ಸಮವಸ್ಥಿತಮೀಶ್ವರಮ್ ।
ನ ಹಿನಸ್ತ್ಯಾತ್ಮನಾಽಽತ್ಮಾನಂ ತತೋ ಯಾತಿ ಪರಾಂ ಗತಿಮ್ ॥
13-28

ಎಲ್ಲರಲ್ಲೂ, ಎಲ್ಲದರಲ್ಲೂ ಅಂತರಾತ್ಮನಾಗಿರುವ ಪರಮೇಶ್ವರನನ್ನು ನೋಡುತ್ತಾ ನೋಡುತ್ತಾ ಇತರರಿಗೆ ಯಾವ ವಿಧವಾದ ಬಾಧೆಯನ್ನೂ ಕೊಡದ ಭಕ್ತನು ತಪ್ಪದೇ ಪರಗತಿಯನ್ನು ಹೊಂದುತ್ತಾನೆ.

ಸತ್ತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿ ಸಂಭವಾಃ ।
ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಮ್ ॥ 14-5

ಅರ್ಜುನ! ಪ್ರಕೃತಿಯಿಂದ ಹುಟ್ಟಿದ ಸತ್ತ್ವ, ರಜಸ್ಸು, ತಮಸ್ಸು – ಎನ್ನುವ ಮೂರು ಗುಣಗಳು ನಾಶವಿಲ್ಲದ ಆತ್ಮನನ್ನು ದೇಹದಲ್ಲಿ ಬಂಧಿಸುತ್ತವೆ.

ಸತ್ತ್ವಾತ್ ಸಂಜಾಯತೇ ಜ್ಞಾನಂ ರಜಸೋ ಲೋಭ ಏವ ಚ ।
ಪ್ರಮಾದಮೋಹೌ ತಮಸಃ ಭವತೋಽಜ್ಞಾನಮೇವ ಚ ॥
14-17

ಸತ್ತ್ವಗುಣದಿಂದ ಜ್ಞಾನ, ರಜೋಗುಣದಿಂದ ಲೋಭ, ತಮೋಗುಣದಿಂದ ಅಜ್ಞಾನ. ಅವಿವೇಕ, ಭ್ರಾಂತಿ ಕ್ರಮವಾಗಿ ಉಂಟಾಗುತ್ತವೆ.

ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ ।

ಮನಃಷಷ್ಠಾನೀಂದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ ॥ 15–7

ನನ್ನ ಅಂಶವೇ ಪ್ರಪಂಚದಲ್ಲಿ ಜೀವಭಾವವನ್ನು ಹೊಂದಿ ಪುರಾತನ ಕಾಲದಿಂದ ಪ್ರಕೃತಿಯಲ್ಲಿರುವ ಮನಸ್ಸು, ಕಣ್ಣು, ಮೂಗು, ಕಿವಿ, ನಾಲಗೆ, ಚರ್ಮ ಎನ್ನುವ ಪಂಚೇಂದ್ರಿಯಗಳನ್ನು ಆಕರ್ಷಿಸುತ್ತದೆ. ಭಗವಂತನು ಅಂಶಿ. ಅಂದರೆ ಅಂಶಗಳು ಉಳ್ಳವನು. ಜೀವನು ಅವನಿಗೆ ಅಂಶಭೂತನು.

ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ ।

ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ॥

ಈ ಪ್ರಪಂಚವನ್ನು ಬೆಳಗಿಸುವ ಸೂರ್ಯನ ತೇಜಸ್ಸು ಚಂದ್ರನಲ್ಲಿರುವ ಮತ್ತು ಅಗ್ನಿಯಲ್ಲಿರುವ ಬೆಳಕು;– ಇದೆಲ್ಲವೂ ನನ್ನ ತೇಜಸ್ಸೆಂದು ತಿಳಿ.

ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।

ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್ ॥ 15–14

ಎಲ್ಲ ಪ್ರಾಣಿಗಳ ಶರೀರದಲ್ಲಿ ಜಠರಾಗ್ನಿಯಾಗಿ. ಪ್ರಾಣ, ಅಪಾನ ಮೊದಲಾದ ವಾಯುಗಳಿಂದ ಕೂಡಿ, ನಾಲ್ಕು ವಿಧವಾದ ಆಹಾರವನ್ನು ಜೀರ್ಣವಾಗುವಂತೆ ಮಾಡುತ್ತೇನೆ. ಅಹಾರಗಳು 1. ಭಕ್ಷ್ಯಗಳು (ಅಗಿದು ತಿನ್ನುವ) 2. ಭೋಜ್ಯಗಳು (ಕುಡಿಯುವ) 3: ಲೇಹ್ಯಗಳು (ಚಪ್ಪರಿಸುವ) 4. ಚೋಷ್ಯಗಳು ( ರಸವನ್ನು ಹೀರುವುದು ) ಎನ್ನುವ ನಾಲ್ಕು ವಿಧವಾದ ಅಹಾರಗಳು.

ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋ

ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ ।

ವೇದೈಶ್ಚ ಸರ್ವೈರಹಮೇವ ವೇದ್ಯೋ

ವೇದಾಂತಕೃದ್ವೇದವಿದೇವ ಚಾಹಮ್ । 15–15

ನಾನು ಅಂತರ್ಯಾಮಿಯಾಗಿ ಎಲ್ಲರ ಹೃದಯದಲ್ಲಿಯೂ ಇರುತ್ತೇನೆ. ಸ್ಮೃತಿ, ಜ್ಞಾನ, ಅವುಗಳ ನಿವೃತ್ತಿ ನನ್ನಿಂದಲೇ ಉಂಟಾಗುತ್ತವೆ, ಎಲ್ಲ ವೇದಗಳಿಂದಲೂ ನಾನೇ ತಿಳಿಯತಕ್ಕವನು. ಎಲ್ಲ ವೇದಾಂತ ಗಳನ್ನು ನಾನೇ ಮಾಡಿದವನು. ನಾನೇ ವೇದಾರ್ಥವನ್ನೆಲ್ಲ ತಿಳಿದವನು.

ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ ।

ಕಾಮಃ ಕ್ರೋಧಸ್ತಥಾ ಲೋಭಃ ತಸ್ಮಾದೇತತ್ತ್ರಯಂ ತ್ಯಜೇತ್ । 16–21

ಆತ್ಮನಾಶದಿಂದ ಹೊಂದುವ ಘೋರನರಕ ನಗರಕ್ಕೆ ಮೂರು ದ್ವಾರ ಗಳು ಮೊದಲನೆಯದು ಕಾಮ. ಎರಡನೆಯದು ಕ್ರೋಧ. ಮೂರ ನೆಯದು ಲೋಭ. ಅದರಿಂದ ವಿವೇಕಿಗಳು ಈ ಮೂರೂ ನರಕ ದ್ವಾರ ಗಳ ಹತ್ತಿರ ಹೋಗಬಾರದು.

ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ ।

ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಮ್ ॥16–23

ಯಾವನು, ಶಾಸ್ತ್ರಗಳು ಪ್ರವಚಿಸಿದ ಮಾರ್ಗವನ್ನು ಬಿಟ್ಟು, ತನ್ನ ಮನಸ್ಸು ಬಂದಂತೆ ನಡೆಯುವನೋ ಅವನು ಕಾರ್ಯಸಿದ್ಧಿ ಹೊಂದುವು ದಿಲ್ಲ. ಅವನಿಗೆ ಈ ಲೋಕದಲ್ಲಿ ಸುಖವೂ ಇಲ್ಲ; ಮೋಕ್ಷವೂ ಇಲ್ಲ.

ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।

ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ॥17–15

ತನಗೂ, ಕೇಳುವವರಿಗೂ ಮನಸ್ಸು ನೋಯದಂತೆ ಮಾತನಾಡು ವುದು, ಸತ್ಯಸ್ವಭಾವನ ಮಾಡುವುದು, ಪ್ರೀತಿಯಿಂದ ಹಿತಬೋಧನೆ ಮಾಡುವುದು ವೇದಗಳನ್ನು, ಸ್ತೋತ್ರಗಳನ್ನು ಪಾರಾಯಣ ಮಾಡು ವುದು, ವಾಚಿಕ ತಪಸ್ಸು ಎಂದು ಹೇಳಲ್ಪಡುತ್ತವೆ.

ಮನಃ ಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।

ಭಾವಸಂಶುದ್ಧಿರಿತ್ಯೇತತ್ ತಪೋ ಮಾನಸಮುಚ್ಯತೇ ॥ 17–16

ಪ್ರಸನ್ನವಾದ ಮನಸ್ಸು, ಸೌಮ್ಯವಾದ ನಡೆ, ಮೌನ, ಮನೋ ನಿಗ್ರಹ, ಪರಿಶುದ್ಧವಾದ ಸಂಸ್ಕಾರವುಳ್ಳ ಭಾವವೇ ಮಾನಸಿಕ ತಪಸ್ಸು.

ದಾತವ್ಯಮಿತಿ ಯದ್ದಾನಂ ದೀಯತೇಽನುಪಕಾರಿಣೇ ।

ದೇಶೇ ಕಾಲೇ ಚ ಪಾತ್ರೇ ಚ ತದ್ದಾನಂ ಸಾತ್ತ್ವಿಕಂ ಸ್ಮೃತಮ್ ॥ 17–20

ಪುಣ್ಯಸ್ಥಲದಲ್ಲಿ, ಪುಣ್ಯಕಾಲದಲ್ಲಿ, ಯೋಗ್ಯನಿಗೆ ಪ್ರತ್ಯುಪಕಾರದ ಅಪೇಕ್ಷೆ ಇಲ್ಲದೆ ಕರ್ತವ್ಯಬುದ್ಧಿಯಿಂದ ಕೊಡುವ ದಾನವು ಸಾತ್ತ್ವಿಕ ದಾನವೆಂದು ಪರಿಗಣಿಸುವುದು.

ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್।

ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್॥18–47

ಸ್ವಧರ್ಮವು ಕೊರತೆಯುಳ್ಳದ್ದಾಗಿ ಇದ್ದರೂ, ಪರಧರ್ಮಗಳನ್ನು ಚೆನ್ನಾಗಿ ಅನುಷ್ಠಾನ ಮಾಡುವ ಸಾಮರ್ಥ್ಯ ಇದ್ದರೂ ಪರಧರ್ಮ ಕ್ಕಿಂತಲೂ ಸ್ವಧರ್ಮವೇ ಮೇಲಾದುದು. ಸ್ವಾಭಾವಿಕವಾದ ಕರ್ಮ ವನ್ನು ಮಾಡುವುದರಿಂದ ಯಾರಿಗೂ ಪಾಪ ಉಂಟಾಗುವುದಿಲ್ಲ.

ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।

ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ

ಮಾಯಯಾ ॥ 18–61

ಈಶ್ವರನು ಎಲ್ಲ ಜೀವಿಗಳ ಹೃದಯ ಆಕಾಶದಲ್ಲಿ ಅಂತರಾತ್ಮನಾಗಿ ಪ್ರಕಾಶಿಸುತ್ತಾನೆ. ಮಕ್ಕಳನ್ನು ತಿರುಗುಯಂತ್ರದ ಮೇಲೆ ಸುತ್ತಿಸು ವಂತೆ ತನ್ನ ಮಾಯೆಯಿಂದ ಪ್ರಾಣಿಗಳನ್ನು ಗಿರಗಿರ ತಿರುಗಿಸುವನು.

ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।

ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ॥

ನಿನ್ನ ಮನಸ್ಸನ್ನು ನನ್ನಲ್ಲಿ ಅಂಕಿತಮಾಡು. ನನ್ನಲ್ಲಿ ಪ್ರೇಮವುಳ್ಳವ ನಾಗು, ನನ್ನ ಭಕ್ತನಾಗು, ಶಕ್ತಿವಂಚನೆ ಇಲ್ಲದೆ ನೀನು ನನ್ನನ್ನೇ ಅರಾಧಿಸಿ ಶರಣು ಹೊಂದು. ನೀನು ನನಗೆ ಪ್ರಿಯವಾದವನು. ಇದು ಸತ್ಯ, ಪ್ರತಿಜ್ಞೆಮಾಡಿ ಹೇಳುತ್ತೇನೆ. ತಪ್ಪದೇ ನನ್ನನ್ನೇ ಸೇರುವೆ.

ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।

ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥ 18–66

ಸಕಲ ಧರ್ಮಗಳನ್ನು ಪರಿತ್ಯಜಿಸಿ ನನ್ನೊಬ್ಬನನ್ನೇ ಶರಣು ಹೊಂದು. ನಾನು ಎಲ್ಲ ಪಾಪಗಳಿಂದಲೂ ನಿನ್ನನ್ನು ವಿಮುಕ್ತಿ ಪಡಿಸುವೆನು. ನೀನು ಬಾಧೆ ಪಡಬೇಡ.

॥ ಸಂಪೂರ್ಣಂ ॥

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯುವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7–ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8–30 ಗಂಟೆಯುವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ.

# ಆಂಜನೇಯ ಸುಪ್ರಭಾತ

ದ್ವಿಭುಜಂ ಸ್ವರ್ಣವರ್ಣಾಂಗಮ್
ರಾಮಸೇವಾ ಪರಾಯಣಮ್
ಮೌಂಜೀ ಕೌಪೀನ ಸಹಿತಮ್
ಅಂಜನಾತನಯಂ ಭಜೇ ॥ ॥ ಶ್ಲೋ ॥

ಕವಿತಾದ್ರುಮದ ಕೊಂಬೆಗಳನೇರಿ
ರಾಮರಾಮನೆಂಬಿನಿಮಾತುಗಳ
ದನಿಗೂಡಿದಿಂಚರವ ನುಲಿಯುತಿದೆ
ಆದಿಕವಿ ವಾಲ್ಮೀಕಿ ಕೋಕಿಲವು
ಸುಪ್ರಭಾತವು ನಿನಗೆ ಹನುಮಂತ ॥ ೧ ॥

ಅಂಜನಿಯ ವರಗುವರ ವಾಯುಸುತ
ಜನಿಸಿದಂದೆ ನಭಕಡರಿ ಭಾನು
ಮಂಡಲವ ಫಲವೆಂದು ಅಂಬರವ
ಚುಂಬಿಸಿದ ಕಪಿಕಿಶೋರನು ನೀನು
ಸುಪ್ರಭಾತವು ನಿನಗೆ ಹನುಮಂತ ॥ ೨ ॥

ಕಾಂಚನದ ಮೈವೊಗರು, ರಂಜಿಸುವ
ಚೆಂಬವಳದಂತೆಸೆವ ಕೆಂಮೊಗವ
ತೋರಯ್ಯ ; ಕಮಲಸಖನುದಿಸಿಹನು
ತಿಳಿಗೊಳದ ತಾವರೆಯು ನಲಿಯುತಿದೆ
ಸುಪ್ರಭಾತವು ನಿನಗೆ ಹನುಮಂತ ॥ ೩ ॥

ಪಾರಿಜಾತ ತರುಮೂಲದೊಳಿರುತ,
ರಾಮನಾಮವ ಜಪಿಪ ಪಾವನನೆ,
ನಾಮ ಸಂಕೀರ್ತನವ ಲಹರಿಯೊಳು
ಕೇಲಿ ಕಂಬನಿ ಮಿಡಿವ ಮಾರುತಿಯೆ
ನೀನೇಳು ಧೀಮಂತ ಹನುಮಂತ ॥ ೪ ॥

ಶತಯೋಜನಾಯತದ ನೀಳ್ಗಡಲ
ಲಂಘಿಸಿದೆ ಗೋದಾಪಿನಂದದಲಿ ;
ಮಾರ್ಗದೊಳು ಮೈನಾಕ ಮನ್ನಿಸಲು
ಸುರಸೆಯನು ನೀಂ ಜಯಿಸಿ ಮುಂಬರಿದೆ,
ಸುಪ್ರಭಾತವು ನಿನಗೆ ಹನುಮಂತ ॥ ೫ ॥

ಮೋಡಗಳ ಮರೆಯ ಸಾರಿದೆಯೊಮ್ಮೆ
ಕಿಂಡಿಯೊಳು ಕಾಣಿಸಿದೆ ಮತ್ತೊಮ್ಮೆ
ಚಂದ್ರಮನು ರಾಹುಮುಖ ಪುಗುವಂತೆ
ಬಾಯ್ಪೊಕ್ಕು ಸಿಂಹಿಕೆಯ ಬಲಿಗೆಯ್ದೆ
ಸುಪ್ರಭಾತವು ನಿನಗೆ ಹನುಮಂತ ॥ ೬ ॥

ತೆರೆತೆರೆಯ ಕಲ್ಲೋಲ ಮಾಲೆಗಳ
ಪರಿಪರಿಯ ಅಸುರಾಹಿ ನಿವಹಗಳ
ನೆರೆಮೊರೆವ ನಿಡುಗಡಲ ದಡವೇರಿ
ಲಂಕೆಯನು ನೀಂ ಕಂಡೆ ಕಪಿವರನೆ
ಸುಪ್ರಭಾತವು ಧೀರ ಹನುಮಂತ ॥ ೭ ॥

ಎಡಗಯ್ಯ ತಾಡನಕೆ ಲಂಕಿಣಿಯು
ಧರೆಗುರುಳಿ "ಹಾ" ಎಂದು ಚೀರಿಡುತ
ಹರಸಿದಳು ವರವಿತ್ತು ; ರಾವಣನ
ವೈಭವವ ನೀಂ ಕಂಡು ಬೆಮೆಗೊಂಡೆ
ಸುಪ್ರಭಾತವು ವೀರ ಹನುಮಂತ ॥ ೮ ॥

ಪುಷ್ಪಕದೊಳು ಸುರಸತಿಯ ಕಂಡು
ರಾಮಸತಿ ಇವಳೆಂದು ಶಂಕಿಸಿದೆ ;
ಅಶೋಕವನವನೊಳಪೊಕ್ಕು ಶಿಂಶುಪದ
ಮೇಲಡರಿ ವರ್ಣಿಸಿದೆ ರಾಮನನು
ಸುಪ್ರಭಾತವು ಭಕ್ತ ಹನುಮಂತ ॥ ೯ ॥

ಅಡ್ಡನೋಟವ ಬೀರಿ ಕಣ್ಣೆತ್ತಿ
ಎವೆ ಕುಸಿದು ಸತಿನೋಡೆ ಬೆಳಗಿದೆಯೊ
ಉದಯ ರವಿ ಗಿರಿಶಿಖರವಡರಿರಲು ಬಾಲ
ರವಿಯಂತೆ, ನಿಶಿತಮತಿ ಮಾರುತಿಯೆ
ಸುಪ್ರಭಾತವು ಪೂಜ್ಯ ಹನುಮಂತ ॥ ೧೦ ॥

ಶ್ರೀರಾಮ ಮುದ್ರಿಕೆಯ ಜಾನಕಿಗೆ
ನೀನಿತ್ತೆ ; ಅವಳಿತ್ತ ಸೀಮಂತ
ರತ್ನವನು ಕೈಗೊಂಡು ಮನವೊಲಿದು
ಮರುಪಯಣಕನುವಾದೆ ಘನಮಹಿಮ
ಸುಪ್ರಭಾತವು ನಿನಗೆ ಹನುಮಂತ ॥ ೧೧ ॥



ರಾಮನಾಯುತನವ್ವೆ ನಿನ್ನ ಮನ
ನಾಲಿಗೆ ನುಡಿವುದವನ ನಾಮವನು ;
ಆಲಿಪುದು ಕಿವಿ ಅವನ ಕಥನವನು
ನೆಲಸಿಹುದು ಆವನ ರೂಪು ಕಂಗಳಲಿ
ಇಂತಿರಲು ನೀನೇಳು ಹನುಮಂತ ‖ ೧೨ ‖

ಕಮಲಮುಖ ಚೆಂಬೊಗರ ಕಡೆಗಣ್ಣು
ಸುಭ್ರೂರಿಗೊಲಿಯೆನಿಸ ಸಿರಿಗೊರಲು
ಎನ್ನೊಡೆಯ ಸರ್ವಾಂಗ ಸುಂದರನು –
ಇಂತೆಂದು ವರ್ಣಿಸುತ ರಾಮನನು
ಮೈ ಮರೆತೆ ನೀನೇಳು ಹನುಮಂತ ‖ ೧೩ ‖

ಧರೆಮೊರೆದು ಗಿರಿಯಲುಗಿ ಕಡಲುಕ್ಕಿ
ನಭ ಮೊಳಗಿ ತಂಪಾಯ್ತು ರವಿಕಿರಣ;
ನೆಲಸಿದುದು ಬಿರುಗಾಳಿ ಮಾರುತಿಯೆ
ಘಟ್ಟಿಸಲು ಅಸುರ ಪುತ್ರನಕ್ಷನನು
ತಳುವದಿರೆ ನೀನೇಳು ಹನುಮಂತ ‖ ೧೪ ‖

ಇಂದ್ರಿಯಂಗಳ ಜಯಿಸಿ ತರಣಿಕುಲ
ಚಂದ್ರಮನ ಸೇವೆಯೊಳು ಮಿಗೆ ನೆಲಸಿ
ರುಂದ್ರರಿಪುಸೇನೆಗಳ ಸಂಹರಿಸಿ
ಇಂದ್ರಜಿತುವನು ಗೆಲಿದ ಧುರಧೀರ
ದಣಿವೇಕೆ ? ನೀನೇಳು ಹನುಮಂತ ‖ ೧೫ ‖

ಅನಿಲಸುತ ಅನಲಸಖ ನೀನಾಗಿ
ಖರಕಿರಣದಂತೆಸೆವ ಬಾಲದುರಿ
ಧಗಧಗಿಸೆ ಲಂಕೆಯನು ಸಲೆಸುಟ್ಟೆ
ಹದಿಬದೆಯ ಸೋಂಕುವನೆ ಪಾವಕನು !
ಚಿಂತಿಸದೆ ನೀನೇಳು ಹನುಮಂತ ‖ ೧೬ ‖

ದಾಶರಥಿ ದಶಶಿರನ ಸಂಹರಿಸಿ
ದನುಜ ಪತಿಯನುಜಂಗೆ ಲಂಕೆಯನು
ತಾನಿತ್ತು ಹನುಮನನು ಮನ್ನಿಸೆನೆ
ಮಾತೆ ತಾಂ ಸೂಸಿದಳು ಕಣ್ಣೊಳಗ
ಮರೆಯದಿರೆ ನೀನೇಳು ಹನುಮಂತ ‖ ೧೭ ‖

ನಲ್ಲನಿಂಗಿತವರಿತ ಜನಕಸುತೆ
ನಿನಗಿತ್ತ ಮೌಕ್ತಿಕದ ಮಣಿಹಾರ
ಕಂದರದೊಳೊಪ್ಪುತಿರೆ ಬೆಳಗಿದೆಯೊ
ಬೆಳ್ಮುಗಿಲು ಬಳಸಿರ್ಪ ಗಿರಿಯಂತೆ;
ಸುಪ್ರಭಾತವು ನಿನಗೆ ಹನುಮಂತ ‖ ೧೮ ‖

ನೀನೆಸಗಿದುಪಕಾರಕೆಣೆಯಿಲ್ಲ
ಕಡುದೀನ ತಾನೆಂದು ಬಿಗಿಯಪ್ಪಿ
ಪರಮಾತ್ಮನರ್ಪಿಸಿದನಾತ್ಮವನು
ನಿನಗೆನಲು ಭಕ್ತಿಯೊಳು ಮೈಮರೆತೆ
ಸುಪ್ರಭಾತವು ನಿನಗೆ ಹನುಮಂತ ‖ ೧೯ ‖

ದಾಶರಥಿ ಪುಷ್ಪಕನೊಳೈತಂದು
ಕದಂಬಮುನಿಯಾಶ್ರಮದೊಳಿರುತಿರೆ
ಸೀತೆಯಾಣತಿಯಂತೆ ನಿರ್ಮಿಸಿದೆ
ರಾಮನಾಮಾಂಕಿತದ ಜಲನಿಧಿಯ
ಕಣ್ದೆರೆದು ನೋಡಯ್ಯ ಹನುಮಂತ ‖ ೨೦ ‖

ಪಸರಿಸಿದ ಲಾಂಗೂಲ ಅಣೆಯಾಗಿ
ಇಕ್ಷುರಸವಾರಾಶಿ ಕೆರೆಯಾಯ್ತು
ಪಾವಸೆಯ ಮಡುವಿನೊಳು ಕಮಲಿನಿಯು
ಮಿಗೆ ನಕ್ಕು ಸುರಿಸುವಳು ಮಧುರಸವ ;
ಸುಪ್ರಭಾತವು ನಿನಗೆ ಹನುಮಂತ ‖ ೨೧ ‖

ಗಜವೈರಿ ಲಯಕಾಲ ಭೈರವನು
ನರ್ತಿಸುತ ಹಣೆಗಣ್ಣ ತೆರೆದಂತೆ
ಗೋಪುರದ ಹಿನ್ನೆಲೆಯೊಳುದಿಸಿದನು
ಬಾಲರವಿ ; ಪಕ್ಷಿಕುಲವುಲಿಯುತಿದೆ
ತಳುವದಿರೆ ನೀನೇಳು ಹನುಮಂತ ‖ ೨೨ ‖

ಇಕ್ಕೆಲದ ಶುಭಶಂಖಚಕ್ರಗಳು
ಪುಚ್ಛದೊಳು ವರಘಂಟೆ ಬಾಜಿಸಲು
ವ್ಯಾಸರಾಯಾರ್ಚಿತನು ನೀನಾಗಿ
ನೆಲಸಿರುವೆ ಕಡೆಕೋಡಿ ಮಾರುತಿಯೆ
ಸುಪ್ರಭಾತವು ನಿನಗೆ ಹನುಮಂತ ‖ ೨೩ ‖

ಕಡಬಮಿದು ಕದಂಬರಾಶ್ರಮವೈ;
ನಾರಿಕೇಳ ಕ್ರಮುಕ ಕದಳಿಗಳ
ಬೀಡು ಜಯಶಾಲಿಗಳ ನಲ್ನಾಡು
ಕರೆಯುತಿವೆ ಶುಕಪಿಕವ್ರಾತಗಳು
ನೀನೇಳು ಕನ್ನಡದ ಕಲಿ ಹನುಮ ‖ ೨೪ ‖

ಕದಂಬಪುರವಾಸಿ ದೊರೆ ತಾನು
ಭಕ್ತಜನರಡಿಗೆರಗಿ ಭಕ್ತಿಯಿಂ
ಮಂಗಳವ ಪಾಡುತಿಹ ಕವಿಕಂಠ
ಕೂಜನಕೆ ಮನಮಿತ್ತು ಏಳಯ್ಯ
ಸುಪ್ರಭಾತವು ನಿನಗೆ ಹನುಮಂತ ‖ ೨೫ ‖

**– ಶ್ರೀ ಕೆ. ದೊರೆಸ್ವಾಮಿ ಅಯ್ಯಂಗಾರ್**

# ಶಕಪುರುಷ ಶಾಲಿವಾಹನ

ವಿಶ್ವದ ಎಲ್ಲ ರಾಷ್ಟ್ರೀಯರಲ್ಲಿಯೂ ತಮ್ಮ ರಾಷ್ಟ್ರದ ಮಹಾ ವ್ಯಕ್ತಿಯೊಬ್ಬನನ್ನು ವಿಶೇಷವಾಗಿ ನೆನಪಿಸಿಕೊಳ್ಳುವ ಸಂಪ್ರದಾಯ ಕಂಡು ಬರುತ್ತದೆ. ಆ ಮಹಾ ವ್ಯಕ್ತಿಯನ್ನು ಶಕ ಪುರುಷ, ಯುಗ ಪುರುಷ ಎಂದು ಕರೆದು ಗೌರವಿಸಿದ್ದಾರೆ. ಅವನ ಹೆಸರಿನಲ್ಲಿ ವರ್ಷಗಳನ್ನು ಎಣಿಸಿ, ತಲೆತಲಾಂತರದವರೆಗೆ ಅವನನ್ನು ನೆನಪಿಸಿಕೊಳ್ಳುತ್ತಿದ್ದಾರೆ. ಸೃಷ್ಟಿ, ಸ್ವಾಯಂಭುವ ಮನು, ವೈವಸ್ವತ ಮನು, ಚೀಣಿ, ಪಾರ್ಸಿ, ಕಾಲ್ಡಿಯಾ, ಈಜಿಪ್ಟ್, ಇಬ್ರಾನಿ, ಯುಧಿಷ್ಠಿರ, ಕಲಿ, ನೂಹ್, ಇಬ್ರಾಹೀಮೀ, ಸ್ಪಾರ್ಟಾ, ಡಾವೂದೀ, ಗ್ರೀಕ್, ರೋಮ್, ನಾಬೂಸಾರಿ. ಬೌದ್ಧ, ಸಿಕಂದರಿ, ವಿಕ್ರಮ, ಫಸಲಿ, ವರ್ಧಮಾನ, ಕ್ರೈಸ್ತ, ಶಾಲಿವಾಹನ, ಕೊಲ್ಲಂ, ಹಿಜರಿ, ಗಾಂಧಿ-ಮುಂತಾದುವು ವಿಶ್ವದ ನಾನಾಕಡೆ ಪ್ರಚಲಿತವಿರುವ ಶಕೆಗಳು. ಸೃಷ್ಟಿ, ಸ್ವಾಯಂಭುವ, ವೈವಸ್ವತ, ಯುಧಿಷ್ಠಿರ, ಕಲಿ, ಬೌದ್ಧ, ವಿಕ್ರಮ, ಫಸಲಿ, ವರ್ಧಮಾನ, ಕ್ರೈಸ್ತ, ಶಾಲಿವಾಹನ, ಕೊಲ್ಲಂ, ಹಿಜರಿ, ಗಾಂಧೀ-ಇವು ಭಾರತದಲ್ಲಿ ಪರಿಗಣಿಸಲ್ಪಡುತ್ತಿರುವ ಶಕೆಗಳು. ದಕ್ಷಿಣ ಭಾರತದಲ್ಲಿ ಶಾಲಿವಾಹನ ಶಕೆಯನ್ನು ಪ್ರಧಾನವಾಗಿ ಪರಿಗಣಿಸುತ್ತಾರೆ. ಪ್ರತಿ ವರ್ಷ ಚೈತ್ರ ಶುದ್ಧ ಪ್ರತಿಪದೆಯಿಂದ ಹೊಸ ಶಾಲಿವಾಹನ ಶಕೆ ಪ್ರಾರಂಭವಾಗುತ್ತದೆ.

**ಕುಂಬಾರನ ಮನೆಯಲ್ಲಿ ಬ್ರಾಹ್ಮಣ ಶಿಶು:** ಈಗಿನ ಮಹಾರಾಷ್ಟ್ರದ ಗೋದಾವರೀ ನದಿ ತೀರದಲ್ಲಿ ಪೈಠಾನ್ ಎಂಬ ಪಟ್ಟಣವಿದೆ. ಪ್ರಾಚೀನ ಕಾಲದಲ್ಲಿ ಇದನ್ನು ಪ್ರತಿಷ್ಠಾನಗರ ಎಂದು ಕರೆಯುತ್ತಿದ್ದರು. ಪೃಥ್ವೀಸ್ಥಾನ, ಪೈಠಣ ಎಂಬ ಹೆಸರುಗಳೂ ಇದಕ್ಕೆ ಇದ್ದವು.

ಈ ನಗರದಲ್ಲಿ ಒಂದು ಬ್ರಾಹ್ಮಣ ಕುಟುಂಬವಿತ್ತು. ಹಿರಿಯರೆಲ್ಲ ಸತ್ತು ಹೋಗಿ, ಆ ಕುಟುಂಬದಲ್ಲಿ, ಅಣ್ಣ-ತಮ್ಮ ಮತ್ತು ಒಬ್ಬ ತಂಗಿ ಮಾತ್ರ ಉಳಿದಿದ್ದರು.

**ಶ್ರೀ ಕೂಡಲಿ ಜಗನ್ನಾಥ ಶಾಸ್ತ್ರಿ**

ತಂಗಿಯ ಹೆಸರು ಸುರೂಪೆ. ಅನಾಥರಾದ ಈ ಮಕ್ಕಳನ್ನು ಒಬ್ಬ ಕುಂಬಾರ ಸಲಹಿದ. ಈ ಮಕ್ಕಳು ಬೆಳೆದು ಯುವಕರಾದರು.

ಒಂದು ದಿನ ಸುರೂಪೆ ಅಡುಗೆಗಾಗಿ ನೀರು ತರಲು ಗೋದಾವರಿ ನದಿಗೆ ಹೋದಳು. ಇವಳು ನೀರು ತುಂಬುತ್ತಿದ್ದ ಸ್ಥಳದಲ್ಲಿ ಒಬ್ಬ ನಾಗಪುರುಷ ವಾಸಿಸುತ್ತಿದ್ದ. ಯುವತಿಯೂ ಸುಂದರಿಯೂ ಆದ ಸುರೂಪೆಯಲ್ಲಿ ಅವನು ಮೋಹಗೊಂಡು, ಬಲಾತ್ಕಾರದಿಂದ ಉಪಭೋಗಿಸಿದ. ನಂತರ "ಕಷ್ಟ ಪರಿಸ್ಥಿತಿ ಬಂದಾಗ ನನ್ನನ್ನು ಸ್ಮರಿಸು. ನಾನು ಬಂದು ಕಷ್ಟ ನಿವಾರಿಸುತ್ತೇನೆ." ಎಂದು ಸಮಾಧಾನಪಡಿಸಿ, ಅವಳನ್ನು ಮನೆಗೆ ಕಳಿಸಿದನು.

ಸುರೂಪೆ ಮನೆಗೆ ಬಂದಳು. ಅವಳನ್ನು ಕುಂಬಾರನ ರಕ್ಷಣೆಯಲ್ಲೇ ಬಿಟ್ಟು, ಅಣ್ಣಂದಿರಿಬ್ಬರೂ ಹೊರ ಹೊರಟರು. ಕುಂಬಾರನು ಸುರೂಪೆಯನ್ನು ಮಗಳಂತೆ ರಕ್ಷಿಸಿದ. ಕೆಲವು ದಿನ ಕಳೆದುವು. ಸುರೂಪೆ ಒಂದು ಗಂಡು ಮಗುವಿಗೆ ಜನ್ಮವಿತ್ತಳು. ಇವನಿಗೆ ಶಾತವಾಹ ಎಂದು ಹೆಸರಿಟ್ಟರು. ದೊಡ್ಡವನಾದ ಮೇಲೆ ಇವನು ಶಾಲಿವಾಹ, ಸಾತವಾಹ, ಸಾಲವಾಹನ, ಸಾಲಾಹಣ, ಹಾಲ-ಮುಂತಾದ ಹೆಸರುಗಳಿಂದ ಪ್ರಸಿದ್ಧನಾದನು.

ಶಾತವಾಹ ಬೆಳೆಯುತ್ತಿದ್ದಂತೆ ಎಲ್ಲರ ಕಣ್ಮಣಿಯಾದ. ಸುರೂಪೆ ಇವನ ಆಟ-ಪಾಟಗಳಲ್ಲಿ ತನ್ನ ಎಲ್ಲ ದುಃಖವನ್ನೂ ಮರೆತಳು. ಕುಂಬಾರನಿಗಂತೂ ಈ ಮಗು ಅಚ್ಚು ಮೆಚ್ಚಿನದಾಯಿತು. ಮಗುವಿನ ಆಟಕ್ಕಾಗಿ ಅನೇಕ ರೀತಿಯ ವಸ್ತುಗಳನ್ನು, ಕುಂಬಾರ ಮಾಡಿಕೊಡುತ್ತಿದ್ದನು. ಶಾತವಾಹನು ಕತ್ತಿ, ಬಿಲ್ಲು, ಬಾಣ, ಆನೆ ಕುದುರೆ-ಮುಂತಾದ ಯುದ್ಧ ಸಾಮಗ್ರಿಗಳನ್ನೇ ತನ್ನ ಆಟಿಕೆಗಳಾಗಿ ಬಳಸುತ್ತಿದ್ದ. ದೊಡ್ಡವನಾದ ಮೇಲೆ ಚತುರಂಗಬಲಕ್ಕೆ ಸಂಬಂಧಿಸಿದ ಆಟಿಕೆಗಳನ್ನು ಇಟ್ಟುಕೊಂಡು



“ಮೊದಕ್ಕೈಸ್ತಾಡಯ”

ಬಂದು ಸೈನ್ಯಕ್ಕೂ ಮತ್ತೊಂದು ಸೈನ್ಯಕ್ಕೂ ಯುದ್ಧ ಮಾಡಿಸುತ್ತಿದ್ದನು. ಇನ್ನೂ ದೊಡ್ಡವನಾದ ಮೇಲೆ ಮಣ್ಣಿನಿಂದ ಸಿಂಹಾಸನ ಮಾಡಿ, ಅದರ ಮೇಲೆ ತಾನು ಕುಳಿತು, ಜೊತೆಯ ಆಟಗಾರರನ್ನು ಪ್ರಜೆಗಳನ್ನಾಗಿ ಮಾಡಿ, ನ್ಯಾಯ ತೀರ್ಮಾನ ಮಾಡುತ್ತಿದ್ದನು.

ತಾಯಿ ಸುರೂಪೆಯು ಶಾತವಾಹನಿಗ ಮನೆಯಲ್ಲೇ ಬಾಲ್ಯವಿದ್ಯಾಭ್ಯಾಸ ನೀಡಿದಳು.

ಒಂದು ದಿನ ನಾಗಾರ್ಜುನ ಎಂಬ ಸಿದ್ಧಪುರುಷ ತನ್ನ ಪ್ರಯಾಣದ ಮಧ್ಯದಲ್ಲಿ ಈ ಕುಂಬಾರನ ಮನೆಗೆ ಬಂದನು. ಇವನು ಭವಿಷ್ಯ ಹೇಳುವುದರಲ್ಲಿ ಸಿದ್ಧಪುರುಷನೆಂದು ಪ್ರಸಿದ್ಧನಾದ ರತ್ನ ಸಿಂಹಾಸನರಾಯನ ಮೊಮ್ಮಗ. ಕುಂಬಾರನೂ ಸುರೂಪೆಯೂ ಈ ಸಿದ್ಧಪುರುಷನನ್ನು, ಶಾತವಾಹನನನ್ನು ತಮ್ಮ ಶಿಷ್ಯನನ್ನಾಗಿ ಪರಿಗ್ರಹಿಸಬೇಕೆಂದು ಪ್ರಾರ್ಥಿಸಿದರು. ನಾಗಾರ್ಜುನ ಒಪ್ಪಿದ. ಶಾತವಾಹ ನಾಗಾರ್ಜುನನ ಶಿಷ್ಯನಾದ. ಶಿಷ್ಯನಲ್ಲಿದ್ದ ಕ್ಷಾತ್ರ ಪ್ರವೃತ್ತಿಯನ್ನು ಅರಿತ ನಾಗಾರ್ಜುನ, ಶಾತವಾಹನಿಗೆ ಕ್ಷತ್ರಿಯೋಚಿತ ವಿದ್ಯೆಗಳನ್ನೇ ಕಲಿಸಿದ.

ಕೆಲವು ವರ್ಷಗಳನಂತರ ಶಾತವಾಹ ಪ್ರತಿಷ್ಠಾನಗರದ ರಾಜನಾದನು. ಅನಂತರ, ಅನೇಕ ಶತ್ರುಗಳನ್ನು ಎದುರಿಸಬೇಕಾಯಿತು. ಗೋದಾವರಿ ನದಿಯ ದಕ್ಷಿಣಕ್ಕೆ ತಗರ ಎಂಬ ರಾಜ್ಯವಿತ್ತು. ತಗರಪಟ್ಟಣ ಇದರ ರಾಜಧಾನಿ. ತಗರರಾಯ ಅಲ್ಲಿಯ ರಾಜ. ಇವನು ಸೂರ್ಯವಂಶದವನು. ಮಹಾ ನೀಚ. ಶಾಲಿವಾಹ ಇವನ ಮೇಲೆ ಯುದ್ಧಮಾಡಿ, ಸೋಲಿಸಿ, ಆ ರಾಜ್ಯಕ್ಕೆ ತಾನೇ ಅಧಿಪತಿಯಾದ.

ಗೋದಾವರಿ - ನರ್ಮದಾ ನದಿಗಳ ನಡುವೆ ಮತ್ತೊಂದು ರಾಜ್ಯವಿತ್ತು. ಶಿಕೋದರಾಯ ಎನ್ನುವವನು ಅದರ ಅರಸ. ಇವನು ತಗರರಾಯನ ಜ್ಞಾತಿ. ಇವನನ್ನೂ ಶಾತವಾಹ ಗೆದ್ದು, ಅವನ ರಾಜ್ಯವನ್ನು ತನ್ನ ಅಧೀನಕ್ಕೆ ಸೇರಿಸಿಕೊಂಡನು.

ನರ್ಮದಾ ನದಿಯ ಉತ್ತರಕ್ಕೆ ಉಜ್ಜಯಿನಿ ಎಂಬ ರಾಜ್ಯವಿತ್ತು. ಉಜ್ಜಯಿನಿ ನಗರ ಅದರ ರಾಜಧಾನಿ. ಶಕ ಎಂಬ ಜನಾಂಗದವರು ಅಲ್ಲಿ ವಾಸಿಸುತ್ತಿದ್ದರು. ವಿಕ್ರಮಾದಿತ್ಯ ಆ ರಾಜ್ಯದ ರಾಜ. (ಇವನನ್ನು ನಹಾಪನಾ ಎಂದೂ ಇತಿಹಾಸಿಕಾರರು ಕರೆದಿದ್ದಾರೆ). ವಿಕ್ರಮ ರಾಜ ಶಾತವಾಹನ ಮೇಲೆ ದಂಡೆತ್ತಿ ಬಂದ. ನರ್ಮದಾನದಿಯ ತೀರದಲ್ಲಿ ಶಾತವಾಹನಿಗೂ ವಿಕ್ರಮನಿಗೂ ಘೋರ ಯುದ್ಧ ನಡೆದು ಇಬ್ಬರಲ್ಲಿಯೂ ಒಪ್ಪಂದ ಉಂಟಾಯಿತು. ನರ್ಮದೆಯ ಉತ್ತರದ ಭೂಭಾಗಕ್ಕೆ ಶಾತವಾಹನ ರಾಜನಾದ. ಜನ ಶಾತವಾಹನನ್ನು 'ಶಕಾರಿ' ಎಂದು ಕರೆದು ಗೌರವಿಸಿದರು.

ಶಾತವಾಹನ ಪ್ರತಿಷ್ಠಾನಗರದ ರಾಜನಾಗಿದ್ದಾಗ, ಒಂದು ದಿನ ರಾಜೋದ್ಯಾನದ ಕೊಳದಲ್ಲಿ, ರಾಣಿಯದೊಂದಿಗೆ, ಜಲಕ್ರೀಡೆಯಾಡುತ್ತಿದ್ದನು. ಆಗ ನೀರನ್ನು ಬೊಗಸೆಯಲ್ಲಿ ತುಂಬಿ ತುಂಬಿ ರಾಣಿಯರ ಮುಖಕ್ಕೆ ಎರಚುತ್ತಿದ್ದನು. ಆಗ ಒಬ್ಬ ರಾಣಿ "ಮೋದಕೈಸ್ತಾಡಯ" ಎಂದಳು. ತಕ್ಷಣವೇ ರಾಜ ಅರಮನೆಗೆ ಹೇಳಿಕಳಿಸಿ ಮೋದಕ (ಕಡುಬು)ಗಳನ್ನು ತರಿಸಿದನು. ಇದನ್ನು ಕಂಡ ರಾಣಿ ನಕ್ಕು "ಮಹಾರಾಜ ಮೋದಕಗಳನ್ನು ಏಕೆ ತರಿಸಿದೆ?" ಎಂದು ಕೇಳಿದಳು. ರಾಜ ಆಶ್ಚರ್ಯದಿಂದ ಅವಳನ್ನು ನೋಡಿದ. ಆಗ ರಾಣಿಯೇ ಹೇಳಿದಳು– "ನಾನು ಹೇಳಿದ್ದು ಮಾ, ಉದಕೈಃ ತಾಡಯ" (ನೀರಿನಿಂದ ಹೊಡೆಯ ಬೇಡ) ಎಂದು. ಅಂದಿನ ಜಲಕ್ರೀಡೆಯನ್ನು ಮುಗಿಸಿ, ರಾಜ ಅರಮನೆಗೆ ಬಂದ. ರಾಜನಿಗೆ, ತನಗೆ ಭಾಷೆಗೆ ಸಂಬಂಧಿಸಿದ ಇಷ್ಟು ಸಣ್ಣ ವಿಷಯವೂ ತಿಳಿದಿಲ್ಲವಲ್ಲ ಎಂದು ವ್ಯಥೆಯಾಯಿತು. ಕಷ್ಟಪಟ್ಟು ಸಂಸ್ಕೃತ ಭಾಷೆಯನ್ನು ಕಲಿತು ಶ್ರೇಷ್ಠ ವಿದ್ವಾಂಸ ಕವಿಯಾದನು.

ಇವನಂತರ ಆಳಿದ ಈ ವಂಶದವರಿಗೆ ಶಾತವಾಹನರು ಅಥವಾ ಶಾಲಿವಾಹನರು ಎಂದು ಹೆಸರು ಬಂದಿತು. ಇವರೇ ಕರ್ನಾಟಕದ ಮೊದಲ ಅರಸುಮನೆತನದವರು. ಇವರು ಸುಮಾರು ನಾಲ್ಕು ಶತಕಗಳವರೆಗೆ ಕನ್ನಡ ನೆಲದಲ್ಲಿ ಅರಸುತನವನ್ನು ಮೆರೆಸಿದರು.

ಮೂಲ ಶಾತವಾಹನು 'ಪ್ರಾಕೃತ ಸಪ್ತತಿ'; 'ಶಾಲಿವಾಹನ ಕೋಶ', 'ಸಂಗ್ರಹ ಗಾಥಾಕೋಶ' ಎಂಬ ಗ್ರಂಥಗಳನ್ನು ರಚಿಸಿರುವಂತೆ ತಿಳಿದು ಬರುತ್ತದೆ.

ಶಕದ ಎಣಿಕೆ:— ಕರ್ನಾಟಕದಲ್ಲಿ ಯುಧಿಷ್ಠಿರ ಶಕೆ 3044 ವರ್ಷಗಳವರೆಗೆ ಗಣನೆಯಲ್ಲಿತ್ತು. ಅನಂತರ ವಿಕ್ರಮ ಶಕೆ ಪ್ರಾರಂಭವಾಯಿತು. ಆ ಮೇಲೆ ಕ್ರಿ. ಶ. 78ನೆಯ ವರ್ಷದಿಂದ ಶಾಲಿವಾಹನ ಶಕೆ ಪ್ರಾರಂಭವಾಯಿತು. ಕರ್ನಾಟಕದ ಉತ್ತರಭಾಗದಲ್ಲಿ ಚಾಲುಕ್ಯ ಮತ್ತು ವಿಕ್ರಮ ಶಕೆಗಳೆರಡೂ ಕೆಲವು ವರ್ಷಗಳವರೆಗೆ ಬಳಕೆಯಲ್ಲಿದ್ದವು. ಆಗಲೂ ಸಹ ಶಾಲಿವಾಹನ ಶಕೆ ಬಳಕೆಯಲ್ಲಿತ್ತು. ಶಾಲಿವಾಹನ ಶಕೆಯನ್ನು ಶಾತವಾಹನ ಶಕೆ ಎಂದೂ ಬರೆದಿರುವುದು ಕಂಡುಬರುತ್ತಿದೆ. ವಿಜಯನಗರದ ಅರಸರ ಕಾಲದಲ್ಲಿ ಶಾಲಿವಾಹನ ಶಕೆಯು ಗಣನೆಗೆ ಪ್ರಾಧಾನ್ಯ ದೊರೆಯಿತು. ಈಗಲೂ ಈ ಶಕೆಯೇ ಪ್ರಧಾನವಾಗಿ ಗಣಿಸಲ್ಪಡುತ್ತಿದೆ.

---

# ಮನೆಯೆ ಮೊದಲ ಪಾಠಶಾಲೆ

ಮಕ್ಕಳ ಶಿಕ್ಷಣವು ರಾಷ್ಟ್ರದ ರಕ್ಷಣಾಪಥವಾಗಬೇಕು. ಮಕ್ಕಳಿದ್ದ ಮನೆಯವರು ಜವಾಬ್ದಾರಿಗೆ ಸಿದ್ಧರಾಗಿರಬೇಕು. ಇಂದಿನ ಮಕ್ಕಳೇ ಮುಂದಿನ ಜನಾಂಗ.

ಮಕ್ಕಳಿಗೆ ಶಿಕ್ಷಣ, ಮಾನಸಿಕ, ದೈಹಿಕ, ಅಗತ್ಯಗಳನ್ನು ಪೂರೈಸುವಂತಿರಬೇಕು. ಮನೆಯಲ್ಲಿ ತಾಯಿ ಅದವಳು, ಕಥೆ ಹೇಳಬೇಕು, 'ಕಾಮಿಕ್ಸ್' ತೋರಿಸಿ ಹೆಚ್ಚು ಓದಲು ಪ್ರೋತ್ಸಾಹಿಸಬೇಕು. ಜೊತೆಗೆ ಶೀಘ್ರ ಕೋಪ, ಉದ್ರೇಕ, ಅಹಂಕಾರ, ದುರ್ನಡತೆ, ದುಂದುವೆಚ್ಚ, ಕೆಟ್ಟಮಾತುಗಳನ್ನು ಕಲಿಯಲು ಅವಕಾಶ ಕೊಡದೆ, ಅವರಲ್ಲಿ ಆತ್ಮವಿಶ್ವಾಸ, ಮಿತವ್ಯಯ, ವಿಕಾಸ ಜೀವನದಲ್ಲಿ ನಡೆಯುವಂತೆ ಪ್ರೇರೇಪಿಸಬೇಕು.

ಡಾ॥ ಜಿ. ಪಿ. ರಾಜರತ್ನಂ ಅವರು "ಮಕ್ಕಳು ಗಣಿಯೊಳಗಿನ ಚಿನ್ನ, ಬಂಡೆಯಿಂದ ಬೇರ್ಪಡಿಸಿ ಕರಗಿಸಿ, ಕಾಯಿಸಿ, ಎರಕ ಹೊಯ್ದು, ಕಟ್ಟಿ, ತಟ್ಟಿ ಒಪ್ಪಹಾಕಿದರೆ ಎಂಥ ಆಭರಣ ಆಗುತ್ತದೆ...... ಮಕ್ಕಳ ಕಾಲದ ವಯಸ್ಸು ಬಂಗಾರದಂತೆ ಅತ್ಯಮೂಲ್ಯವಾದದ್ದು. ಸತ್ಯಹೇಳುವುದು, ಧರ್ಮದಲ್ಲಿ ನಡೆಯುವುದು, ಎಂಬುದನ್ನು ಆಗ ಕಲಿಯದೆ ಹೋದರೆ ಅನಂತರ ಅದು ಅನುಷ್ಠಾನಕ್ಕೆ ಬರುವುದು ಸುಲಭವಲ್ಲ. ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೇ!" ಎಂಬುದಾಗಿ ತಿಳಿಸಿದ್ದಾರೆ.

ಮಕ್ಕಳು ಅನುಕರಣಪ್ರಿಯರು. ಅವರಿಗೆ ಭಜನೆ, ಪುಟ್ಟ-ಪುಟ್ಟ ನಾಟಕ – ಮನರಂಜನೆ ಮೂಲಕ ಸಂಸ್ಕೃತಿಯನ್ನು ಪರಿಚಯಿಸಬೇಕು. ಇದರಿಂದ ಅನಕ್ಷರಸ್ಥ ಮಕ್ಕಳಿಗೂ ಅನುಕೂಲವಾಗುವುದು. ಮಕ್ಕಳು ಸ್ವಾತಂತ್ರಪ್ರಿಯರು. ಒಮ್ಮೊಮ್ಮೆ ತಮ್ಮ ವಯಸ್ಸಿಗೆ ಮೀರಿದ ಮಾತುಗಳನ್ನು ಆಡುವರು. ನಲ್ನುಡಿಗಳಾಗಿದ್ದರೆ ಪ್ರೋತ್ಸಾಹ ಕೊಡಬೇಕು. ಮಕ್ಕಳೆದುರಿಗೆ ಭೇದ–ಭಾವವಮಾಡಬಾರದು. ಪರಿಸರದಿಂದಲೂ ಮಕ್ಕಳು ಕೆಡಬಹುದು, ಜಾಗ್ರತೆ ವಹಿಸಬೇಕು.

ತಾಯಿ ದೇವರೆಂದು ವೇದ
ಬಾಯಿ ಬಿಟ್ಟು ಹೇಳುತಿಹುದು
......................
ಮನೆಯೆ ಮೊದಲ ಪಾಠಶಾಲೆ
ಜನನಿ ತಾನೇ ಮೊದಲ ಗುರುವು
ಜನನಿಯಿಂದ ಪಾಠಕಲಿತ ಜನರು ಧನ್ಯರು

ಆದರೆ, ಇಂದು ಪಾಠಶಾಲೆಯೇ ಮಕ್ಕಳಿಗೆ ವಿದ್ಯೆಯ ತಳಹದಿ ಎಂಬ ನಂಬಿಕೆ ನಮ್ಮಲ್ಲಿ ಒಡಮೂಡಿರುತ್ತದೆ. ಇದು ತಪ್ಪುಕಲ್ಪನೆ. ಮಕ್ಕಳಿಗೆ ಮನೆಯೇ ಪಾಠಶಾಲೆಯಾಗಬೇಕು. ಮನೆಯಲ್ಲಿ ಏನುಕಲಿಯುತ್ತಾರೋ ಮುಂದೆ ಅದೇ ಅವರಿಗೆ ಸಂಪ್ರದಾಯವಾಗಿ ಬೆಳೆಯುತ್ತದೆ. ಸಂಸ್ಕೃತಿ ಕೇಂದ್ರ ಮನೆಯೇ ಹೊರತು – ಪಾಠಶಾಲೆ ಆಗಲಾರದು... ತಾಯಿ ತಂದೆಯರು ಮಕ್ಕಳ ಮನಸ್ಸಿನ ಮೇಲೆ ಸದ್ಗುಣಗಳ ಸಂಸ್ಕಾರವನ್ನು ದಿನವೂ ವೀರ–ಧೀರ–ಭಕ್ತಿರಸ ಪೂರ್ಣ ಚರಿತ್ರೆಯನ್ನು ಓದಿ ಹೇಳಬೇಕು. ಒಳ್ಳೆಯ ನಡತೆಗಳ ಬೀಜವು ಚಿಕ್ಕಂದಿನಲ್ಲಿಯೇ ಮೊಳಕೆಯೊಡೆಯುತ್ತದೆ.

ಮಕ್ಕಳ ಮನಸ್ಸಿನ ಬಗ್ಗೆ ಕವಿ 'ಬೀಚಿ' ಅವರು–

ಮಕ್ಕಳ ನಗು ಚೆಂದ, ಅವು ಅತ್ತರು ಚೆಂದ
ಅಕ್ಕರದಿ ಕರೆದರೆ ಅಡುತ್ತ ಬರುವುವು
ಸೊಕ್ಕಿಲ್ಲ ಸೆಳವಿಲ್ಲ ಬಡಿವಾರ ಇಷ್ಟಿಲ್ಲ
ಮಕ್ಕಳೇ ದೇವರು ಹೌದೇನೋ ತಿಮ್ಮ

ಇಂಥಹ ಮಕ್ಕಳಿಗೆ ಸದುಪದೇಶದ ಕತೆಗಳನ್ನು ನಿಯಮದಿಂದಲೂ, ಕಳಕಳಿಯಿಂದಲೂ ಹೇಳಿ, ಎಳೆ ಮನಸ್ಸಿನ ಮೇಲೆ ನೀತಿಯ ಉತ್ಕೃಷ್ಟ ಸಂಸ್ಕಾರವನ್ನು ನಿರಂತರವೂ ಮಾಡಿ, ಅವರನ್ನು ನಿರ್ವ್ಯಸನಿಗಳನ್ನಾಗಿ ಮಾಡಿ ಒಳ್ಳೆಯಹಾದಿಗೆ ಹಚ್ಚಬೇಕು. ಇದರಲ್ಲೇ ಅವ್ಯಕ್ತವಾಗಿ ರಾಷ್ಟ್ರದ ಉನ್ನತಿ–ಉದ್ಧಾರವಡಗಿದೆ.



ಮತ್ತೀಗೆರೆ ಅನಂತು

ಸುತ್ತಮುತ್ತಲಿನ ಪರಿಸ್ಥಿತಿಯೂ ಸಂಸ್ಕಾರವೂ ಎಳೆಮನಸ್ಸಿನ ಮೇಲೆ ಬಿಂಬಿಸುತ್ತದೆ. ಮಕ್ಕಳ ಬಗ್ಗೆ ಹೆಚ್ಚು ಹಣವನ್ನು ವೆಚ್ಚಮಾಡಿದರೆ; ತಮ್ಮ ಕರ್ತವ್ಯ ಮುಗಿಯಿತೆಂದು ಕೆಲವರ ಅಭಿಪ್ರಾಯ. ತಾಯಂದಿರು ತಮ್ಮ ಮಕ್ಕಳನ್ನು ಮುದ್ದುಮಾಡಿ, ಹಠಮಾರಿಗಳನ್ನಾಗಿ ಮಾಡಬಾರದು. ಅವರ ಪುಂಡಾಟಿಕೆಗಳನ್ನು ಮೊಂಡುತನವನ್ನು ಖಂಡಿಸಬೇಕು. ಮಿತಿಮೀರಿದ ಬಳಿಕ ಪಶ್ಚಾತ್ತಾಪ ಪಡಬೇಕಾದೀತು. ...

ಮಕ್ಕಳ ಮನಸ್ಸು ಮೃದು. ಆ ಮೃದು ಮನಸ್ಸಿನ ಮೇಲೆ ಆ ಘಾತಗಳ ಮೂಲಕ ಕೆಲವೊಮ್ಮೆ ಪ್ರತಿಕ್ರಿಯೆಯಾಗುವುದನ್ನು ಕಾಣುತ್ತೇವೆ. ದುಷ್ಟ ತಂದೆ, ಕುಡುಕ ತಂದೆ, ಲೋಭಿ ತಂದೆ, ದುಂದುಗಾರಿಕೆತನದಿಂದ – ಗೃಹದಲ್ಲಾಗುವ ಅವಾಂತರಗಳಿಂದ ಮಕ್ಕಳ ಮನಸ್ಸಿನ ಮೇಲೆ ಕೆಟ್ಟ ಪರಿಣಾಮ ಬೀರುವುದು.

ಬಾಲ್ಯದಲ್ಲೇ ಮಕ್ಕಳು ಸದಾ ಚಟುವಟಿಕೆಯಿಂದಿರುವಂತೆ ಶಿಕ್ಷಣ ನೀಡಬೇಕು. ಶಾಲೆಗೆ ಹೋಗದೆ ಇರುವ ಮಗುವಿಗೆ ತಂದೆಯು ಕೋಪಿಸಿಕೊಂಡರೆ– ತಾಯಿಯು ಪುತ್ರಮೋಹದಿಂದ ಅಡ್ಡ ಬರಬಾರದು; ಬರುವುದಾದರೆ ಅವಳೇ ಮಗುವಿಗೆ ವೈರಿಯಾಗುತ್ತಾಳೆ. ಇಲ್ಲಿ ಸುಭಾಷಿತವೊಂದನ್ನು ನೆನಪುಮಾಡಿಕೊಳ್ಳಬಹುದು–ಮಕ್ಕಳನ್ನು ಹೀಗೆ ಬೆಳೆಸಬೇಕು–

ರಾಜವತ್ ಪಂಚವರ್ಷಾಣಿ
ದಶವರ್ಷಾಣಿ ದಾಸವತ್ ।
ಪ್ರಾಪ್ತೇ ಚ ಷೋಡಶೇ ವರ್ಷೇ
ಪುತ್ರಂ ಮಿತ್ರವದಾಚರೇತ್ ॥

ತಂದೆಯಾದವನು ಮಗುವನ್ನು ಐದುವರ್ಷಗಳವರೆಗೆ ರಾಜನಂತೆಯೂ, ಮುಂದಿನ ಹತ್ತು ವರ್ಷಗಳ ಕಾಲ ಸೇವಕನಂತೆಯೂ – ಭಾವಿಸಿಕೊಂಡು; ಹದಿನಾರನೆಯ ವರ್ಷದಿಂದ ಮುಂದಕ್ಕೆ ಮಿತ್ರನಂತೆ ಪರಿಗಣಿಸಬೇಕು.

ಮಕ್ಕಳಿಗೆ ನಿತ್ಯವೂ, ಪುಟ್ಟ–ಪುಟ್ಟ ನೀತಿ ಪದ್ಯಗಳನ್ನು ಬಾಯಿಪಾಠ ಮಾಡಿಸುವುದು ಒಳ್ಳೆಯದು. ಮಾನವನ ಹಿರಿಮೆ – ದೊಡ್ಡಸ್ತಿಕೆಗಳು ತಾಯಿ–ತಂದೆಗಳನ್ನೇ ಹೆಚ್ಚಾಗಿ ಅವಲಂಬಿಸಿರುತ್ತದೆ. ಅವನ ಆಗು – ಹೋಗುಗಳ ಅಡಿಗಲ್ಲನ್ನು ಕೂಡಿಸುವುದು ಅವನ ಬಾಲ್ಯವೇ! ಬಾಲ್ಯದಲ್ಲಿ ಮಗುವಿನ ಮೇಲಾಗುವ ಪರಿಣಾಮವು ಸ್ಥಿರವಾಗಿ ಉಳಿಯುತ್ತದೆ. ಮಗುವಿನ ಮನಸ್ಸು ತೆರದ ಮನಸ್ಸು– ಅವರನ್ನು 'ಕಡೆದಂತೆ' ಅವರ ಆಕಾರವು ರೂಪಗೊಳ್ಳುವುದು. ತಾಯಿಯ ನಡೆನುಡಿ, ನಲಿವು–ಒಲಿವು' ಮೊದಲಾದ ಕ್ರಿಯೆಗಳು ಮಗುವಿನ ಮನಸ್ಸು, ಬುದ್ಧಿ ಮತ್ತು ಹೃದಯಗಳಿಗೆ ಎರೆಯುವ ಹಾಲಿನಂತಿರುತ್ತದೆ. ಮಗುವಿನ ಎದುರಿನಲ್ಲಿ ತಾಯಿ–ತಂದೆಯು ಸಿಟ್ಟು– ರಂಪಾಟಮಾಡಿದರೆ, ಮಗುವಿನ ಮನಸ್ಸಿನ ಮೇಲೆ ಅದರ ಪರಿಣಾಮವಾಗುವುದನ್ನು ಮರೆಯಬಾರದು. ಸೂರ್ಯ ಚಂದ್ರರಂತೆ, ತಂದೆ–ತಾಯಿಗಳ ನಡತೆಯು ಪರಿಶುದ್ಧವೂ ಉಜ್ವಲವಾದುದೂ ಆಗಿರಬೇಕು. ಆಗ ಮಕ್ಕಳ ಮನಸ್ಸು ರಸಪೂರ್ಣವಾಗಿ, ರಮ್ಯವಾಗಿ, ಪವಿತ್ರವಾಗಿ ವಿಕಾಸಗೊಳ್ಳುತ್ತದೆ. ಇಲ್ಲದೆ ಹೋದರೆ ಹುಳುಕು, ಕೊಳಕಾಗಿ ತೇಜೋಹೀನವಾಗಿ ಅಪವಿತ್ರವಾಗುವುದು. ಮಕ್ಕಳ ಮನಸ್ಸು ತಿಳಿಯಾದ ಕೊಳದ ನೀರಿನಂತೆ, ಕದಡಿ ರಾಡಿ ಮಾಡಬಾರದು. ಅವರ ಸುತ್ತ ತಿಳಿಯಾದ ವಾತಾವರಣವನ್ನು ಕಲ್ಪಿಸಿಕೊಡಬೇಕು; ಸ್ವಾಮಿ ವಿವೇಕಾನಂದರು ಒಂದೆಡೆ "ತಾಯಿಯು, ಮಕ್ಕಳ ಸೇವಕಳೂ, ಸ್ನೇಹಿತಳೂ, ಶಿಕ್ಷಕಿಯೂ ಆಗಿರಬೇಕು, ... ಆಗಲೇ ಮಕ್ಕಳು ಸತ್‌ಪ್ರಜೆಗಳಾಗುವುದರಲ್ಲಿ ಸಂದೇಹವಿಲ್ಲ" ಎನ್ನುತ್ತಾರೆ.

ಮಕ್ಕಳು ವಿದ್ಯಾವಂತರಾಗುವುದೂ, ಗುಣವಂತರಾಗುವುದೂ ಮನೆಯಲ್ಲಿ ತಾಯಿ ತಂದೆಯರ ಹೊಣೆ, ಶಾಲೆಯಲ್ಲಿ ಶಿಕ್ಷಕರಹೊಣೆ. ತಂದೆಯಾದವನು ತನ್ನ ಮಕ್ಕಳಿಗೆ, ಯಾವುದನ್ನು ತಿಳಿದರೆ ಅವರು ನಾಶವಾಗುವುದಿಲ್ಲವೋ ಅಂತಹ ವಿದ್ಯೆಯನ್ನು ತಿಳಿಸಿಕೊಡದಿದ್ದರೆ, ಅವನು ಅವರನ್ನು ನಾಶಮಾಡಿದಂತೆಯೇ. ಎಷ್ಟೇ ಸಂಪತ್ತು ಇದ್ದರೂ ಅದು ನಾಶವಾಗುತ್ತದೆ. ಆದರೆ ಬಾಲ್ಯದಲ್ಲಿ ಕಲಿತ ವಿದ್ಯೆ ರಕ್ಷಿಸುತ್ತದೆ. ನಮ್ಮ ಮಕ್ಕಳು ಉತ್ತಮರಾಗಬೇಕೆಂದು ಬಯಸುತ್ತಿದ್ದರೆ–ಅವರಿಗೆ ಪ್ರೀತಿಯಿಂದಲೇ ಶಿಸ್ತು, ಸಂಯಮ ವಿಧೇಯತೆ, ಒಳ್ಳೆಯ ಮಾತುಗಳು, ಸದಾಚಾರ ಅವಶ್ಯಕವಾಗಿ ಕಲಿಸಬೇಕು. ಆಗಲೇ ಅವರು ಮುಂದೆ ನಮಗೆ ಕೃತಜ್ಞರಾಗಿರುವರು.

'ಮಕ್ಕಳಿಸ್ಕೂಲು ಮನೇಲಲ್ವೆ' ಎನ್ನುತ್ತಾರೆ ಟಿ. ಪಿ. ಕೈಲಾಸಂ. ಈ ನುಡಿ ನೂರಕ್ಕೆ–ನೂರು ಪಾಲು ಸತ್ಯ. ಮಕ್ಕಳು ಒಳ್ಳೆಯವರಾದರೆ–ಮನೆ ಶೀಲಸೌಂದರ್ಯದಿಂದ ಸೊಗಸುವುದು – ಮುಂದೆ 'ದೇಶ'ದ ಸ್ಥಿತಿ–ಗತಿ ಚೆನ್ನ. ನಂತರ–ಲೋಕವೇ ಶಾಂತಿಯ ನೆಲೆವೀಡಾಗುವುದು.

ಮಕ್ಕಳಿಗೆ ಮನೆಯೇ ಮೊದಲ ಪಾಠಶಾಲೆಯಾದರೆ, ನಂತರ ಪಾಠಶಾಲೆಯಲ್ಲಿ ಅವರ ಬುದ್ಧಿ ವಿಕಾಸಗೊಂಡು ಸತ್‌ಪ್ರಜೆಗಳಾಗಿ ಬಾಳಿ–ಲೋಕ ಪೂಜ್ಯರೆನಿಸಿ ಕೊಳ್ಳುವುದರಲ್ಲಿ ಸಂದೇಹವಿಲ್ಲ. ★

## ಗೃಹಲಕ್ಷ್ಮಿ

# ಪುರಂದರದಾಸರು ಚಿತ್ರಿಸಿದ ಯಶೋದಾ ಕೃಷ್ಣ



ಹರಿದಾಸ ಶ್ರೇಷ್ಠರಾದ ಪುರಂದರ ದಾಸರು, ವಾತ್ಸಲ್ಯಭಾವದ ಅಪೂರ್ವ ಚಿತ್ರಣವೊಂದನ್ನು ತಮ್ಮ ದೇವರ ನಾಮಗಳಲ್ಲಿ ನಮಗೆ ನೀಡಿದ್ದಾರೆ. ನವವಿಧ ಭಕ್ತಿಗಳಲ್ಲಿ ಒಂದಾದ ವಾತ್ಸಲ್ಯಭಾವ ಈ ಹಾಡುಗಳಲ್ಲಿ ಹೊನಲಾಗಿ ಹರಿದಾಡಿದೆ. ಮಾತೃವಾತ್ಸಲ್ಯದ ದಿವ್ಯ ಸೌಂದರ್ಯವನ್ನು, ಬಾಲ್ಯದ ಮುಗ್ಧ ಮೋಹಕತೆಯನ್ನು ಎರಕ ಹೊಯ್ದು ನಿರ್ಮಿಸಿದ ಹೊನ್ನ ಪುತ್ಥಳಿಗಳು, ಯಶೋದೆ ಮತ್ತು ಕೃಷ್ಣ. ತಮ್ಮ ಭಾವ ನಿರ್ಭರ ವಾಣಿಯಿಂದ ಅವುಗಳಿಗೆ ಜೀವ ತುಂಬಿ ಭಾವುಕ ಭಕ್ತರ ಹೃದಯದಂಗಣದಲ್ಲಿ ನಲಿದಾಡಿಸಿದ್ದಾರೆ ಪುರಂದರದಾಸರು.

ಯಾವ ಜಪತಪಗಳನ್ನೂ ತಿಳಿಯದ, ಧ್ಯಾನ ಮೌನಗಳನ್ನು ಅರಿಯದ, ಮುಕ್ತಿಗಾಗಿಯೂ ಹಂಬಲಿಸದ ಮುಗ್ಧ ಹೆಣ್ಣು ಯಶೋದೆ. ಆದರೆ ಬಹು ಕಠಿಣ ತಪಸ್ಸಿಗೂ ಅಲಭ್ಯವಾದ ಪರಮಾತ್ಮನ ಸಾನ್ನಿಧ್ಯವನ್ನು ಕೇವಲ ತನ್ನ ವಾತ್ಸಲ್ಯದಿಂದ ಪಡೆದ ಭಾಗ್ಯವಂತೆ. ಮಾತೃಪ್ರೇಮಕ್ಕಿರುವ ಮಹಶ್ಶಕ್ತಿಯಿದು. ಭಗವಂತನು ಉಪದೇಶಿಸಿರುವ ಸುಲಭ ಪೂಜೆಯ ಪ್ರತೀಕವೇ ಇವಳು. ಯಶೋದೆಗೆ ಬಾಲಕೃಷ್ಣನ ಶುಶ್ರೂಷೆಯೇ ಸಕಲ ವಿಧವಾದ ಪೂಜೆ. ಅವಳ ಕಣ್ಣುಗಳಲ್ಲಿ ಸದಾ ಕೃಷ್ಣನ ಚೆಲುವ ಮೂರ್ತಿ. ಕಿವಿಗಳಲ್ಲಿ ಅವನ ಜೇನ್ನುಡಿ. ಹೃದಯದ ಪ್ರತಿಯೊಂದು ಮಿಡಿತವೂ ಕೃಷ್ಣಾ ಎಂದೇ ಕರೆಯುತ್ತದೆ. ತನ್ನತನವನ್ನೇ ಅವಳು ಮಗನ ಪ್ರೇಮದಲ್ಲಿ ಕರಗಿಸಿಬಿಟ್ಟಿದ್ದಾಳೆ. ಆದರಿಂದಲೇ ಬಾಲಕೃಷ್ಣನನ್ನು ಎತ್ತಿ ಆಡಿಸುವ ಮಹದ್ಭಾಗ್ಯವನ್ನು ಪಡೆದಿದ್ದಾಳೆ. ಪುರಂದರದಾಸರು ಯಶೋದೆಯ ತಾಯ್ತನದ ಸೌಭಾಗ್ಯವನ್ನು ತಾವೇ ಸವಿದವರೆಂಬಂತೆ ಬಗೆಬಗೆಯಾಗಿ ಮನದಣಿಯ ಬಣ್ಣಿಸಿದ್ದಾರೆ.

ಶ್ರೀಪತಿ ತಾ ಶಿಶುರೂಪಿನಲ್ಲಿರುವುದು ಗೋಪಿಯ ಪರಮ ಸೌಭಾಗ್ಯವಲ್ಲದೆ ಇನ್ನೇನು? ದೇವಗಂಗಾ ಜನಕನಿಗೆ, ನಿತ್ಯ ನಿರ್ಮಲನಿಗೆ, ನೀರನೆರೆದು ತಂದೆತ್ತಿ ತೊಡೆಯೊಳಿಟ್ಟು ಮೊಲೆಯೂಡಿ ಮುತ್ತುಕೊಟ್ಟು ಬಲುವಿಧದಿಂದಾಡಿಸಿ ಸಮಾಧಾನ ಪಡಿಸುತ್ತಾಳೆ. 'ಕಡು ಮುದ್ದು ರಂಗನ ತೊಡೆಯ ಮೇಲೆತ್ತುತ ಜಡೆಯ ಹೆಣೆದು ಹೂ ಮುಡಿಸಿ ಬೇಗ, ಬಿಡದೆ ಮುತ್ತಿನ ಜೇಡರಳೆಲೆಯನ್ನು' ಅಲಂಕರಿಸುತ್ತಾಳೆ. ಈ ಜಗನ್ಮೋಹಕ ಶಿಶುವನ್ನು ನೋಡಿ ನೋಡಿ ಆನಂದಿಸುತ್ತಿರುವಾಗ ತನ್ನ ಎಳೆಯ ಕಂದನಿಗೆ ಎಲ್ಲಿ ದೃಷ್ಟಿ ತಾಕಿತೊ ಎಂದು ಆ ತಾಯ ಹೃದಯಕ್ಕೆ ಭಯವಾಗುತ್ತದೆ. ತಟ್ಟನೆ ದೃಷ್ಟಿ ತಾಕಿತೆಂದಿಟ್ಟು ವಿಭೂತಿಯ ತಟ್ಟೆಯೊಳಾರತಿಯ ಬೆಳಗಿ ಥಟ್ಟನೆ ಅಷ್ಟು ಬೇವು ನಿವಾಳಿಸಿ ತೊಟ್ಟಿಲೊಳಿಟ್ಟು ತೂಗುತ್ತಾಳೆ. 'ಹೊಳೆವಂಥ ರನ್ನದ ತೊಟ್ಟಿಲ ಮೇಲೆ ಥಳಿಥಳಿಸುವ ಗುಲಗಂಜಿಯ ಮಾಲೆ ಅಳದೆ ಪಿಡಿದಾಡೆನ್ನೆಯ ಮುದ್ದುಬಾಲ' ಎಂದು ಒಲೈಸಿ ಮಗುವನ್ನು ಮಲಗಿಸುತ್ತಾಳೆ. ಸಾಗರ ಪತಿಯಾಗಿ ಭೋಗಿಶಯನದಲಿ ಯೋಗ ನಿದ್ರೆಯೊಳಿಪ್ಪ ಪರಮಾತ್ಮನು ಯಶೋದಾದೇವಿಯ ವಾತ್ಸಲ್ಯಪೂರ್ಣ ಜೋಗುಳವನ್ನಾಲಿಸುತ್ತ ಗಾಢವಾಗಿ ನಿದ್ರಿಸುತ್ತಾನೆ!

ಪುರಂದರದಾಸರ ಹಲವಾರು ಹಾಡುಗಳಲ್ಲಿ ತಾಯಿ ಮಮತೆಯ ಅನಂತ ಮುಖ ಪರಿಸ್ಫುಟಗೊಂಡಿದೆ. ತಾಯಿ ಮಗುವಿಗೆ ಸ್ತನ್ಯಪಾನ ಮಾಡಿಸುವುದು ಒಂದು ಅಮೃತ ಅನುಭವ. 'ಬಲಿಯಿತ್ತ ಧಾರೆಯ ಜಲವ ಕರದೊಳಿಟ್ಟು ನೆಲವ ಈರಡಿ ಮಾಡಿದ ದೇವನ ತೊಡೆಯೊಳಿಟ್ಟು ತಲೆಯ ನೇವರಿಸುತ್ತ ಮೊಲೆಯೂಡಿಸುತ್ತಾಳೆ' ಯಶೋದೆ. ಕೃಷ್ಣ ಒಂದು ಕುಜವನುಣುತ, ಮತ್ತೊಂದು ಕುಜವ ಪಿಡಿದು ಸಂದಿಲಿ ಕಿರುನಗೆಯಿಂದ ತಾಯ ಮೊಗವನ್ನು ನೋಡುತ್ತಾನೆ. ಸವ್ಯ ಹಸ್ತದಿ ಅಪಸವ್ಯ ಕರವ ಪಿಡಿದು ನವ್ಯ ಸುಧಾಂಗುಲಿ ಸವಿಯುತಲಿ ಅವ್ಯಕ್ತ ಮಧುರೋಕ್ತಿಗಳನ್ನಾಡುತ್ತಾನೆ. ಆನಂದಭರದಿಂದ ದೇವಿ ಮಗುವನ್ನು ಬಿಗಿದಪ್ಪಿ ಮೈಮರೆಯುತ್ತಾಳೆ. ಪರಿಪರಿಯಿಂದ ಮಗುವನ್ನು ಮುದ್ದಿಸುತ್ತಾಳೆ. ಅರಳೆಲೆ ಮಾಗಾಯಿ ಬೆರಳ ಗುಂಗುರವಿಟ್ಟು, ತರಳನ ಮೈಸಿರಿ ತರುಣಿ ನೋಡುತ ಹಿಗ್ಗಿ 'ಬಾಲಕನೆ ಕೆನೆಹಾಲು ಮೊಸರನೀವೆ. ಲೀಲೆಯಿಂದಲಿ ಎನ್ನ ತೋಳ ಮೇಲ್ ಮಲಗೆಂದು' ಮುಗುಳುನಗೆಯಿಂದ ಮುದ್ದು ತಾ ತಾರೆಂದು ಲಾಲಿಸುತ್ತಾಳೆ. 'ಬೂಚಿ ಬಂದಿದೆ ರಂಗ, ಚಾಚಿಕುಡಿದು ಸುಮ್ಮನೆ ನೀ ಪಾಚಿಕೊಳ್ಳೊ ಕೃಷ್ಣಯ್ಯ' ಎಂದು ಬೆದರಿಸುತ್ತಾಳೆ. ಅದಕ್ಕೆ ಹೆದರಿದವ

**ಶ್ರೀಮತಿ ಸುಮನ ಬದರೀನಾಥ್**

ನಂತೆ ಕೃಷ್ಣ ಕಣ್ಮುಚ್ಚಿ ನಿದ್ರೆಯನ್ನು ನಟಿಸುತ್ತಾನೆ.

ಮಗು ಈಗ ಸ್ವಲ್ಪ ದೊಡ್ಡವನಾಗಿದ್ದಾನೆ. ಅವನಿಗೆ ಆಟಪಾಟಗಳನ್ನು ಕಲಿಸುವ ಸಂಭ್ರಮ ಯಶೋದೆಗೆ- ತಮ್ಮ ಭಕ್ತಿಯ ಕಣ್ಣಿನಿಂದ ಹೃದಯದಂಗಣದಲ್ಲಿ ಕಂಡ ಪರಮಾತ್ಮನ ಬಾಲ ಲೀಲೆಗಳನ್ನು ಸುಭಗ ಸುಂದರವಾಗಿ ಪುರಂದರದಾಸರು ಹಾಡಿದ್ದಾರೆ. ಅವರ ಹಾಡುಗಳಲ್ಲಿ ಕೃಷ್ಣನ ಆಟಪಾಟಗಳೆಲ್ಲ ಬಹು ಜೀವಂತವಾಗಿ ಮೂಡಿವೆ. ಪ್ರತಿಯೊಂದೂ ಕಣ್ಣಿಗೆ ಕಟ್ಟುವ ಭಾವಪೂರ್ಣ ಜ್ವಲಂತ ಚಿತ್ರ. ಒಂದರಲ್ಲಿ ಯಶೋದೆ 'ತೋಳು ತೋಳು ರಂಗ ತೋಳನ್ನಾಡೈ, ಸ್ವಾಮಿ ನೀಲವರ್ಣದ ಕೃಷ್ಣನೆ ತೋಳನ್ನಾಡೈ, ಹುಲಿಯುಗುರ- ರಳಲೆ ಮಾಗಾಯಿಗಳನ್ನಿಟ್ಟ ತೋಳನ್ನಾಡೈ ಫಲಿರಂದಿಗೆ ಗೆಜ್ಜೆಯ ನಲಿವುತ್ತ ತೋಳನ್ನಾಡೈ' ಎಂದು ತೋಳಾಡಿಸುತ್ತಿದ್ದಾಳೆ. ಇನ್ನೊಂದರಲ್ಲಿ 'ತಾ ಹೊನ್ನ ಹಿಡಿ ಹೊನ್ನ ಚಿನ್ನದಗುಬ್ಬಿ ಹಿಡಿ ಹೊನ್ನ ತಾ ಕೃಷ್ಣ' ಎಂದು ತನುಮನ ಎತ್ತಿ ಸಂತೋಷದಿಂದ ಗೋಪಿ ಚೆಲುವ ಹಸ್ತವನಾಡಿಸುಎನ್ನುತ್ತಿದ್ದಾಳೆ. 'ಬಾಲಕನ ನಿಲ್ಲೊ ನಿಲ್ಲೊ ಎಂದು ಬಿಡದೆ ಕೊನೆ ಬೆರಳಲ್ಲಿ ಕರ ಪಿಡಿದು ಅಡಿಯಿಡು ಮಗನೆ ದಟ್ಟಡಿಯಿಡು' ಎಂದು ನಡೆಯ ಕಲಿಸುತ್ತಿದ್ದಾಳೆ. ಹೀಗೆ ಜಗದೋದ್ಧಾರನ ಮಗನೆಂದು ತಿಳಿಯುತ ಸುಗುಣಾಂತ ರಂಗನ ಪರಿಪರಿಯಾಗಿ ಆಡಿಸುತ್ತಿದ್ದಾಳೆ. 'ಯಾರ ಕಂದ ನೀಸಾರ ನಿಧಿ ನೀಯಾರ ರತ್ನವೊ. ನೀ ಯಾರ ಮಾಣಿಕವೊ ಸೇರಿತು ಎನಗೊಂದು ಚಿಂತಾಮಣಿಯೆಂದು' ತನ್ನ ಭಾಗ್ಯಕ್ಕೆ ತಾನೇ ಹಿರಿಹಿರಿ ಹಿಗ್ಗುತ್ತಿದ್ದಾಳೆ. ನಿಗಮಕೆ ಸಿಲುಕದ ಅಗಣಿತ ಮಹಿಮನನ್ನು, ಅಣೋರಣೀಯನೂ, ಮಹತೋಮಹಿಮನೂ, ಅಪ್ರಮೇಯನೂ, ಆದ ಈ ಮಗುಗಳ ಮಾಣಿಕ್ಯವನ್ನು ತನ್ನ ಕರತಲದಲ್ಲಿಟ್ಟು, ಆಡಿಸಿ ಪಾಡಿಸಿ ನುಡಿಸಿ ನೋಡಿ ನಲಿಯುತ್ತಿರುವ ಗೋಪಿಯ ಭಾಗ್ಯಕ್ಕೆ ಎಣೆಯುಂಟೆ?

ತಾಯ ಮಡಿಲಲ್ಲಿ ಮಲಗುತ್ತಿದ್ದ ಮುದ್ದು ಮಗುವೀಗ ತುಂಟ ಪೋರನಾಗಿದ್ದಾನೆ. ಗೋಕುಲದಲ್ಲಿ ಅವನ ತುಂಟತನಕ್ಕೆ ಮಿತಿಯಿಲ್ಲ. ನಿಂತಲ್ಲಿ ನಿಲ್ಲದ ಚಂಚಲ ಚರಣಗಳವನವು. ಸದಾ ಹೊರಗೋಡಲು ತವಕಿಸುವ ಅವನನ್ನು 'ಮನೆಯೊಳಗಾಡೊ ಗೋವಿಂದ, ನೆರೆಮನೆಗಳಿಗೇಕೆ ಪೋಗುವಿಯೊ ಮುಕುಂದ' ಎಂದು ಗದರಿಸುತ್ತಿದ್ದಾಳೆ.

‘ನೊಸಲಿಗೆ ತಿಲಕವನಿಡುವೆ ಅಚ್ಚ ಹೊಸ ಬೆಣ್ಣೆಯನ್ನಿಕ್ಕಿ ಕಜ್ಜಾಯ ಕೊಡುವೆ. ಹೊಸ ಆಭರಣಗಳನಿಡುವೆ, ಮುದ್ದು ಹಸುಳೆ ನಿನ್ನ ನೋಡಿ ಸಂತೋಷಪಡುವೆ’ ಎಂದು ಆಸೆ ತೋರಿಸುತ್ತಾಳೆ. ‘ಪೋಗದಿರೆಲೊ ರಂಗ ಬಾಗಿಲಿಂದಾಚೆಗೆ ಪೋಗದಿರೆಲೊ ರಂಗ. ಭಾಗವತರು ಕಂಡರೆತ್ತಿಕೊಂಡೊಯ್ವರೊ, ದೊರಕದ ವಸ್ತುವೆಂದು ದೊರಕಿತು ತಮಗೆಂದು ಹರುಷದಿಂದಲಿ ನಿನ್ನ ಕರೆದೆತ್ತಿಕೊಂಬರು, ಮಗುಗಳ ಮಾಣಿಕ್ಯ ತಗಲಿತು ಕರಕೆಂದು ಬೇಗದಿಂದಲಿ ಬಂದು ಬಿಗಿದಪ್ಪಿಕೊಂಬರು,’ ಅನಂತರ ನಾನೇನು ಮಾಡಲಿ, ನಿನ್ನನ್ನು ಕ್ಷಣಕಾಲವಾದರೂ ನಾನು ಅಗಲಿರಲಾರೆ ಎಂದು ಬೇಡಿಕೊಳ್ಳುತ್ತಾಳೆ. ಆದರೆ ಕಳ್ಳ ಕೃಷ್ಣ ಅವಳ ಕಣ್ಣು ತಪ್ಪಿಸಿ ಓಡಿಯೇ ಬಿಟ್ಟಿದ್ದಾನೆ. ಯಶೋದೆ ಮಗನನ್ನು ಹುಡುಕಿಕೊಂಡು ಗೋಕುಲದ ಮನೆ ಮನೆಯಲ್ಲೂ ಅರಸುತ್ತಾಳೆ. ‘ಅಮ್ಮ ನಿಮ್ಮ ಮನೆಗಳಲ್ಲಿ ನಮ್ಮ ರಂಗನ ಕಂಡಿರೇನಮ್ಮ, ಕಾಶಿ ಪೀತಾಂಬರ ಕೈಯಲಿ ಕೊಳಲು ಪೂಸಿದ ಶ್ರೀಗಂಧ ಮೆಯ್ಯೊಳಗಮ್ಮ ಲೇಸಾಗಿ ತುಲಸಿಯ ಮಾಲೆಯ ಧರಿಸಿಹನಮ್ಮ, ಕರದಲ್ಲಿ ಕಂಕಣ, ಬೆರಳಲ್ಲಿ ಉಂಗುರ, ಕೊರಳಲ್ಲಿ ಹಾಕಿದ ಹುಲಿಯುಗುರಮ್ಮ. ಅರಳೆಲೆ, ಕನಕ ಕುಂಡಲ ಕಾಲಲಂದುಗೆ ಗೆಜ್ಜೆ, ಕುಂಕುಮ ಕಸ್ತೂರಿ ಕರಿನಾಮ ತಿದ್ದಿ ಬಿಂಕದಿಂದಲಿ ಕೊಳಲನೂದುತ್ತ ಪಾಡುತ್ತ ಬಂದ ನಮ್ಮ ಮುದ್ದು ಕೃಷ್ಣನನ್ನು ಕಂಡಿರೇ ನಮ್ಮ’ ಎಂದು ಹುಡುಕುತ್ತಾಳೆ. ವೇದ ತತಿಗಳಿಂದ, ಯೋಗ ತಪಗಳಿಂದ ಹೋದ ಹೊಲಬನ್ನರಿಯದಾತನನ್ನು ಗೋಕುಲದ ಬೀದಿ ಬೀದಿಗಳಲ್ಲಿ ಅರಸುತ್ತಾಳೆ. ಪರಿಪರಿಯಿಂದ ಅರಸಿದರೂ ಎಲ್ಲಿ ಅವಿತು ಕುಳಿತಿರುವನೊ ಈ ಕಳ್ಳ ಹುಡುಗ? ಕ್ಷಣಕಾಲದ ಅಗಲುವಿಕೆಯೂ ಯುಗಯುಗವಾಗಿ ತೋರುತ್ತಿದೆ ಯಶೋದೆಗೆ. ‘ಎಂದಪ್ಪಿಕೊಂಬೆ, ರಂಗಯ್ಯನ ಎಂದಪ್ಪಿಕೊಂಬೆ, ನಾನೆಂದು ಮುದ್ದಾಡುವೆ, ಎಂದಿಗೆ ಸವಿಮಾತನಾಡಿ ನಾ ದಣಿವೆ, ಅಂದಿಗೆ ಪಾಡುಗೆ ಘಲಿಘಲಿರೆಂದು ಚೆಂದಾಗಿ ಕುಣಿವ ಮುಕುಂದನ ಎಂದಪ್ಪಿಕೊಂಬೆ’ ಎಂದು ಹಂಬಲಿಸುತ್ತಾಳೆ. ‘ಓಡಿಬಾರೈ ವೈಕುಂಠಪತಿ ನಿನ್ನ ನೋಡುವೆ ಮನದಣಿಯೆ; ಕಾಡಬೇಡವೊ ಕರುಣಾಕರ ಬೇಡಿಕೊಂಬೆನೊ ನಿನ್ನ ರಂಗಯ್ಯ, ಚಿಣ್ಣರ ಒಡನಾಟ ಸಾಕೊ, ಬೆಣ್ಣೆಯ ಮೆಲುವುದು ಬೇಡವೊ ಕಂದ’ ಎಂದು ಬೇಡಿಕೊಳ್ಳುತ್ತಾಳೆ. ಆಗ ಅವಳ ಮಮತೆಯ ಕರೆಗೆ ಓಗೊಟ್ಟು ಓಡಿ ಬಂದು ಅವಳನ್ನಪ್ಪುತ್ತಾನೆ ಚೆಲುವ ಕೃಷ್ಣ. ಆನಂದಸಾಗರದಲ್ಲಿ ಮುಳುಗಿ ಹೋಗುತ್ತಾಳೆ ಯಶೋದಾದೇವಿ. ‘ಮುದ್ದು ತಾರೊ ರಂಗ. ಅಂದವಾದ ಕರ್ಪೂರದ ಕರಡಿಗೆಯ ಬಾಯೊಳೊಮ್ಮೆ ಮುದ್ದು ತಾರೊ, ಕಡೆದ ಬೆಣ್ಣೆ ಮೊಸರನೆಲ್ಲ ಒಡನೆ ಮೆದ್ದ ಬಾಯೊಳೊಮ್ಮೆ ಮುದ್ದು ತಾರೊ’ ಎಂದು ಮಗನನ್ನು ಮುದ್ದಿಸಿ ಸಂತೃಪ್ತಳಾಗುತ್ತಾಳೆ.

ಬಾಲ್ಯದ ತುಂಟತನವೆಲ್ಲ ಸೇರಿ ರೂಪುಗೊಂಡಿದೆ ಕೃಷ್ಣನಲ್ಲಿ. ಗೋಕುಲದಲ್ಲಿ ಅವನ ತುಂಟತನಕ್ಕೆ ಮಿತಿಯಿಲ್ಲ. ಅದನ್ನು ಸಹಿಸಿ ತಾಳ್ಮೆಗೆಟ್ಟ ಗೋಪಿಯರು ನಿನ್ನ ಮಗನ ಕಾಟ ಬಲವಾಗಿದೆ, ಇನ್ನೆಷ್ಟು ತಾಳುವೆವೇ ಗೋಪಿ ಎಂದು ಯಶೋದೆಯ ಬಳಿಗೆ ದೂರೊಯ್ಯುತ್ತಾರೆ. ಅವರ ದೂರುಗಳನ್ನು ಕೇಳಿ ಬೇಸತ್ತವಳು, ಪೋಗಿರೆ ನೀವು ರಂಗಯ್ಯನ ಮೇಲೆ ದೂರೇನು ಕೊಂಡು ಬಂದಿರೆ ಎಂದು ಮುನಿಯುತ್ತಾಳೆ. ‘ನಮ್ಮ ಬಾಲನ ಬರಿದೆ ದೂರುವಿರಿಯೇಕಮ್ಮ, ಹಾಲು ಕುಡಿಯಲರಿಯ ಎನ್ನಯ ಕಂದ ಪಾಲ ಬೆಣ್ಣೆ ಕದಿವನೆ, ನಡೆಯಲರಿಯದ ಬಾಲ ನಿಮ್ಮ ಮನೆಯಲ್ಲಿ ದುಡುಕು ಕಳವು ಮಾಳ್ಪನೆ, ನಮ್ಮ ಮನೆಯಲ್ಲಿ ಕುಡಿಯಲು ಹಾಲು ಮೊಸರುಗಳಿಲ್ಲವೆ?’ ಎಂದವರನ್ನು ಜರಿದು ಕಳುಹಿಸುತ್ತಾಳೆ. ಆದರೆ ಅವಳೂ ಬಲ್ಲಳು ತನ್ನ ಮಗನ ತುಂಟತನವನ್ನು. ಕೃಷ್ಣಾ ನಿನ್ನ ತುಂಟತನ ಮಿತಿಮೀರಿದೆ. ಸುಮ್ಮನಿರುತ್ತೀಯೊ ದೊಡ್ಡಗುಮ್ಮನನ್ನು ಕರೆಯಲೊ ಎಂದು ಬೆದರಿಸುತ್ತಾಳೆ. ಕೃಷ್ಣ ಹೆದರಿದಂತೆ ನಟಿಸುತ್ತಾ, ಅವಳ ಮನ ಕರಗುವಂತೆ ನಂಬಿಸಿ ಗೋಗರೆಯುತ್ತಾನೆ. ‘ಗುಮ್ಮನ ಕರೆಯದಿರೆ ಅಮ್ಮಾ ನೀನು ಗುಮ್ಮನ ಕರೆಯದಿರೆ, ಸುಮ್ಮನೆ ಇದ್ದೇನು ಅಮ್ಮಿಯ ಬೇಡೆನು, ಮಮ್ಮು ಉಣ್ಣುತ್ತೇನೆ ಅಮ್ಮ ಅಳುವುದಿಲ್ಲ. ಚಿಣ್ಣರ ಬಡಿಯೇನು, ಅಣ್ಣನ ಬಯ್ಯೆನು. ಬೆಣ್ಣೆಯ ಬೇಡೆನು, ಮಣ್ಣು ತಿನ್ನುವುದಿಲ್ಲ. ಆವಿನ ಮೊಲೆಯೂಡೆ, ಕರುಗಳ ಬಿಡೆ, ದೇವರಂತೆ ಬಂದು ಠಾವಿಲಿ ಕೂಡುವೆ. ಅಮ್ಮಾ ನೀನು ಗುಮ್ಮನ ಕರೆಯದಿರೆ’ ಎಂದು ಮುದ್ದಗರೆಯುತ್ತಾನೆ. ಮಗನ ಈ ಮುದ್ದು ಮಾತಿನ ಮೋಡಿಗೆ ಮರುಳಾಗಿ ಗೋಪೀದೇವಿ, ಮುನಿಸೆಲ್ಲ ಮಾಯವಾಗಿ ಅವನನ್ನು ಬಿಗಿದಪ್ಪಿ ಮುದ್ದಾಡಿದಳು. ಆಗ ಕೃಷ್ಣ, ‘ಅಂಗಿ ತೊಟ್ಟೇನೆ ಗೋಪಿ ಶೃಂಗಾರವಾದೇನೆ, ಅಪ್ಪಚ್ಚಿ ಕೊಡು ಎನಗೆ ಗೋಡಿ ತುಪ್ಪವ ಕೊಡೆ ಮೇಲೆ ಅಪ್ಪಗೆ ಹೇಳಿ ಟೊಪ್ಪಿಗೆ ಕೊಡಿಸೆ, ಉಪ್ಪು ಕಡಲೆಯನ್ನು ಚೀಲದಿ ತುಂಬಿವೆ’ ಎಂದೆಲ್ಲ ಮಗುವಿನ ಅಮಾಯಕತೆಯನ್ನು ತೋರಿ ಗೋಪಿಗೆ ಮುದನೀಡುತ್ತಾನೆ. ತಾಯಿ ಹೃದಯ ಮಗನನ್ನು ಹೃದಯದುಂಬಿ, ಆಯುಷ್ಯವಂತನಾಗು, ಅತಿ ಬಲ್ಲಿದನಾಗು, ಧೀರನಾಗು, ದಯಾಂಬುಧಿಯಾಗು, ದ್ವಾರಾವತಿಗೆ ಅರಸನಾಗು ಎಂದೆಲ್ಲ ಹರಸುತ್ತದೆ.

ಹೀಗೆ ಪುರಂದರದಾಸರು ಸರಳಸುಂದರವಾದ ಭಾಷೆಯಲ್ಲಿ ತಾಯಿ ಮಗುವಿನ ನಡುವಿನ ವಾತ್ಸಲ್ಯಬಂಧನದ ಮಧುರ ಚಿತ್ರಗಳನ್ನು ತಮ್ಮ ಕೃತಿಗಳಲ್ಲಿ ಮೂಡಿಸಿದ್ದಾರೆ. ಇವುಗಳಲ್ಲಿ ಮಾತೃಪ್ರೇಮದ ಸಹಜ ಅಭಿವ್ಯಕ್ತಿಯಿದೆ. ಅನನ್ಯ ಭಕ್ತನ ತನ್ಮಯತೆಯಿದೆ. ಬಾಲ್ಯದ ಸೊಗಸನ್ನು ಸವಿದುಂಡ ಸಂತೃಪ್ತ ಮನಸ್ಸಿದೆ. ಯಶೋದಾಕೃಷ್ಣರ ಬೃಂದಾವನಕ್ಕೇ ನಮ್ಮನ್ನು ಕರೆದೊಯ್ಯುತ್ತವೆ ಈ ಹಾಡುಗಳು. ಇವುಗಳನ್ನು ಆಗಾಗ್ಗೆ ಮನಸ್ಸಿನಲ್ಲಾದರೂ ಹಾಡಿಕೊಳ್ಳುತ್ತಿದ್ದರೆ, ಕೃಷ್ಣಪ್ರೇಮವು ನಮ್ಮ ಹೃದಯದಲ್ಲೂ ಪ್ರಚೋದಿತಗೊಂಡು, ಆತ್ಮೋನ್ನತಿಗೆ ದಾರಿಯಾಗುವುದರಲ್ಲಿ ಸಂದೇಹವಿಲ್ಲ. ಯಶೋದಾಕೃಷ್ಣರ ಪ್ರೇಮ ಚಿತ್ರಣ, ಕೇವಲ ಕರ್ಣ ರಸಾಯನವಲ್ಲ. ಹೃದಯಕ್ಕೆ ಅಲೌಕಿಕ ಆನಂದದ ಅನುಭೂತಿಯನ್ನುಂಟುಮಾಡುವ ಅಮೃತವರ್ಷ.

★




**ಪುಣ್ಯಕ್ಷೇತ್ರ ತಿರುಪತಿ**

ಪುಟಗಳು : 48+4 ಬೆಲೆ : 1–50

ಲೇಖಕರು : ಡಿ॥ ಕೊರಟ ಶ್ರೀನಿವಾಸರಾವ್,
ಪ್ರಕಾಶಕರು : ಆನಂದನಿಲಯ ಪ್ರಕಾಶನ,
ಸಮೀರಪುರ ವಿಸ್ತರಣ, ಚಾಮರಾಜ ಪೇಟೆ,
ಪಶ್ಚಿಮ ಬೆಂಗಳೂರು – 18

ಪುಣ್ಯಕ್ಷೇತ್ರವಾದ ತಿರುಪತಿಯನ್ನು ಪುರಾಣೇತಿಹಾಸಗಳಿಂದ ಈ ಪುಸ್ತಕದಲ್ಲಿ

## ಸುಂದರ ವರ್ಣನೆಯ ಕಿರುಹೊತ್ತಗೆ

ವರ್ಣಿಸಲಾಗಿದೆ. ಪುಣ್ಯಕ್ಷೇತ್ರ ತಿರುಪತಿಯ ಬಗ್ಗೆ ವಿವರವನ್ನು ಬಯಸುವ ಆಸಕ್ತರಿಗೆ ಇದೊಂದು ಉತ್ತಮವಾದ ಕೈಪಿಡಿ. ತಿರುಪತಿಯ ಅಕ್ಕಪಕ್ಕದ ಅನೇಕ ಅಜ್ಞಾತ ಪುಣ್ಯಕ್ಷೇತ್ರಗಳ ಪರಿಚಯ ಕೂಡಾ ಇಲ್ಲಾಗಿದೆ. ಕೆಳತಿರುಪತಿಯಲ್ಲಿ ಅಲಮೇಲು ಮಂಗೈ ಎಂಬ ಪದ್ಮಾವತಮ್ಮನವರ ದೇವಾಲಯವಿದೆ. ಯೋಗಿಮಲ್ಲಂ ಎಂಬ ಊರಿನಲ್ಲಿರುವ ತಿಪ್ಪಲಾಧೀಶ್ವರ ಮುಡಿಯ ದೇವಾಲಯದ ಪರಿಚಯ, ಮೂಕಲ್ಲಕೊಂಡ ಮತ್ತು ಸೋಪಾನ ಮಾರ್ಗದಲ್ಲಿರುವ ಘಂಟಾ ಮಂಟಪ, ಮೊಣಕಾಲ ಮುರಿ ಗೋಪುರ, ಇವುಗಳ ಪರಿಚಯವಿದೆ. ಆದಿ ಶೇಷನ ಕಾರಣದಿಂದ ಶೇಷಾಚಲವೆಂದೂ, ವೃಷಭನೆಂಬ ಅಸುರನನ್ನು ನಿಗ್ರಹಿಸಿ ಅನುಗ್ರಹಿಸಿದುದರಿಂದ ವೃಷಭಾದ್ರಿಯೆಂದೂ, ವಾಯುದೇವನಿಗೂ ಆದಿ ಶೇಷನಿಗೂ ಸ್ಪರ್ಧೆ ಹುಟ್ಟಿ ಮೇರು ಪರ್ವತದ ಮಗ ಆನಂದನು ಇಲ್ಲಿಗೆ ಬಂದುದರಿಂದ ಆನಂದಾದ್ರಿ ಎಂದೂ, ಶ್ರೀರಾಮ ಭಕ್ತನಾದ ಆಂಜನೇಯನನ್ನು ಪಡೆಯಲು ಅಂಜನಾದೇವಿ ತಪಸ್ಸು ಮಾಡಿದ ಸ್ಥಳವಾದ್ದರಿಂದ ಅಂಜನಾದ್ರಿ ಎಂದೂ, ಕಪಿವೀರನಾದ ನೀಲನ ಹೆಸರಿನಿಂದ ನೀಲಾದ್ರಿ ಎಂದೂ ಈ ಬೆಟ್ಟಗಳನ್ನು ಕರೆಯುತ್ತಾರೆ ಎಂಬ ಬಗ್ಗೆ ಮಾಹಿತಿ ಇವೆ.

ವೆಂಕಟೇಶ್ವರನ ಪರಿವಾರದ ಬಗ್ಗೆ ತುಂಬಾ ಆಸಕ್ತಿಪೂರ್ಣ ಲೇಖನಗಳನ್ನು ಲೇಖಕರು ಕೊಟ್ಟಿದ್ದಾರೆ. ಶ್ರೀ ಭೋಗ ಶ್ರೀನಿವಾಸ, ಶ್ರೀ ಉತ್ಸವ ಶ್ರೀನಿವಾಸ, ಶ್ರೀ ಉಗ್ರ ಶ್ರೀನಿವಾಸ, ಶ್ರೀ ಕೊಲವು ಶ್ರೀನಿವಾಸ, ಶ್ರೀ ಕೃಷ್ಣಮೂರ್ತಿ, ಶ್ರೀ ಸೀತಾಲಕ್ಷ್ಮಣ ಸುಗ್ರೀವ ಸಹಿತ ಶ್ರೀರಾಮ, ಶ್ರೀ ಚಕ್ರತ್ತಾಳ್ವಾರರು ಇವರುಗಳ ಬಗ್ಗೆಯೂ ಸಂಪೂರ್ಣ ಮಾಹಿತಿಯನ್ನು ಲೇಖಕರು ನೀಡಿದ್ದಾರೆ.

ಸ್ವಾಮಿ ಪುಷ್ಕರಿಣಿ, ಕುಮಾರಧಾರೆ, ಕಪಿಲ ತೀರ್ಥ, ಶಕ್ರತೀರ್ಥ, ವಿಷ್ವಕ್ಸೇನ ತೀರ್ಥ, ಫಲ್ಗುನೀ ತೀರ್ಥ, ಜಾಬಾಲಿತೀರ್ಥ, ಸನಕಸನಂದ ತೀರ್ಥ, ಕಾಯ ರಸಾಯನ ತೀರ್ಥ, ತುಂಬುರ ತೀರ್ಥ, ಆಕಾಶ ಗಂಗಾ, ಪಾಪನಾಶನಿ ತೀರ್ಥ, ಈ ವೆಂಕಟಗಿರಿಯ ಪುಣ್ಯ ತೀರ್ಥಗಳ ಬಗೆಗೂ ವಿವರವಾಗಿ ಈ ಹೊತ್ತಗೆಯಲ್ಲಿ ವರ್ಣಿಸಲಾಗಿದೆ.

ಒಟ್ಟಾರೆ ಲೇಖಕ ಶ್ರೀಕೊರಟ ಶ್ರೀನಿವಾಸರಾಯರಿಂದ ಸುಂದರವಾಗಿ ವರ್ಣಿಸಲ್ಪಟ್ಟಿದೆ ಶ್ರೀ ಕ್ಷೇತ್ರ ತಿರುಪತಿ.

**– ನುಗ್ಗೆಹಳ್ಳಿ ರಂಗನಾಥ್**

# ನಟರಾಜನ ದ್ವಾರೆಯಲ್ಲಿ

**ವಿದ್ವಾನ್ ಬ. ನ. ಗುಂಡೂರಾವ್**



ತಮಿಳುನಾಡಿನ ಮಧುರಾನಗರ ವನ್ನಾಳಿದ ರಾಜರಲ್ಲಿ ಅರಿಮರ್ದನ ಪಾಂಡ್ಯನ ಹೆಸರು ಇತಿಹಾಸ ಪ್ರಸಿದ್ಧವಾಗಿದೆ. ಈತನಿಗೆ ಪರಮಾಪ್ತಮಿತ್ರನೂ – ರಾಜ್ಯಕ್ಕೆ ರಕ್ಷಾಕವಚದಂತಿದ್ದ ಮಹಾಮಂತ್ರಿಯೂ ಆಗಿದ್ದವನು ಮಾಣಿಕ್ಯವಾಚಕರ್. ಈತ ಸೌಜನ್ಯಶೀಲನಾದ ಭಕ್ತಾಗ್ರಣಿ. ಭಾರತ ದೇಶದ ಮಹಾನ್ ಸಂತರ ಸಾಲಿನಲ್ಲಿ ಈತನಿಗೆ ಅಗ್ರಮಾನ್ಯಸ್ಥಾನ ಲಭ್ಯವಾಗಿದೆ.

ಒಂದು ಸಲ ರಾಜ್ಯದ ಸೈನ್ಯಕ್ಕಾಗಿ ಅರಬಿ ಕುದುರೆಗಳನ್ನು ಕೊಳ್ಳಬೇಕಾಯ್ತು. ಚಿನ್ನದ ನಾಣ್ಯಗಳ ಥೈಲಿಗಳನ್ನು ಕುದುರೆಗಳ ಮೇಲೆ ಹೇರಿಕೊಂಡು ಮಂತ್ರಿ ವಾಚಕರ್ ವ್ಯಾಪಾರಕ್ಕೆ ಹೊರಟ. ದಾರಿಯಲ್ಲಿ ಆತನಿಗೊಂದು ಧ್ವನಿ ಕೇಳಿಸಿತು. ಆ ಧ್ವನಿಮಾಧುರ್ಯಕ್ಕೆ ಮನಸೋತು ಅದೇ ದಿಕ್ಕಿಗೆ ಹೊರಟಾಗ ಒಂದು ಮರದ ಕೆಳಗೆ ಒಬ್ಬ ತೇಜಸ್ವಿ ಯತಿ ಕುಳಿತಿದ್ದುದನ್ನು ಕಂಡ. ಆತ ತನ್ಮಯಚಿತ್ತನಾಗಿ ಒಂದು ಸ್ತೋತ್ರವನ್ನು ಹಾಡುತ್ತಿದ್ದ. ಮಾಣಿಕ್ಯವಾಚಕರ್ ಆ ಸಂತನಲ್ಲಿ ತನ್ನ ಗುರುವನ್ನು ಕಂಡ. ತನ್ನ ಭಗವಂತನನ್ನು ದರ್ಶಿಸಿದ; ಧನ್ಯೋಸ್ಮಿಯೆಂದುಕೊಂಡ. ಅವನಿಗೇನೊ ಪುನರ್ಜನ್ಮವಾದಂತೆ ಭಾಸವಾಯ್ತು; ಯಾವುದೊ ಒಂದು ಪೊರೆ ಕಳಚಿಹೋದಂತೆ ಅನುಭವವಾಯ್ತು.

"ಕರುಣಾಮೂರ್ತಿಯಾದ ದೇವದೇವನ ಮಹಿಮೆಯನ್ನು ಕೊಂಡಾಡು. ನಿನ್ನ ಮಾತಿನಲ್ಲಿ ನನ್ನ ಧ್ವನಿ ಅನ್ತರ್ಗತವಾಗಿರುತ್ತದೆ".

– ಎಂದು ಆಶೀರ್ವದಿಸಿ, ಆ ಸಂತ ಕಾಡಿನೊಳಕ್ಕೆ ಹೊರಟುಹೋದ. ಎಲ್ಲಿ ಹುಡುಕಿದರೂ ಆತ ಪುನಃ ಕಾಣಿಸಲಿಲ್ಲ.

ಮಹಾಮಂತ್ರಿ ಮಾಣಿಕ್ಯವಾಚಕರ್ ತನ್ನಲ್ಲಿದ್ದ ಹಣವೆಲ್ಲ ಖರ್ಚುಮಾಡಿ ಆ ಕಾಡಿನಲ್ಲೊಂದು ಶಿವಾಲಯ ಕಟ್ಟಿಸಿದ. (ಅದು ಈಗಲೂ ಇದೆ — ಆ ಯೋಗೀಂದ್ರ ಕುಳಿತಿದ್ದ ಸ್ಥಳದಲ್ಲಿ ಆ ಮರವೂ ಇದೆ.) ರಾಜ್ಯದ ಬೊಕ್ಕಸದ ಹಣವನ್ನು ಮನಸ್ವಿ ಖರ್ಚುಮಾಡಿದ ಅಪರಾಧಕ್ಕಾಗಿ ಅರಿಮರ್ದನ ಪಾಂಡ್ಯ – ತನ್ನ ಮಂತ್ರಿಯನ್ನು ಕಾರಾಗೃಹದಲ್ಲಿರಿಸಿದ. ಗೌರವಾನ್ವಿತ ಮಂತ್ರಿ ಎಲ್ಲರ ಆಕ್ಷೇಪಣೆಗೆ ಗುರಿಯಾದ – ಹಾಸ್ಯಕ್ಕೆ ಗುರಿಯಾದ. ಕೆಲವರಂತೂ–ಬಂಧುಗಳೂ ಸಹ–ಆತನನ್ನು ಹುಚ್ಚನೆಂದರು. ಮಾಣಿಕ್ಯವಾಚಕರ್ ಈ ಶಿಕ್ಷೆಯನ್ನು ಸಂತೋಷವಾಗಿ ಸ್ವೀಕರಿಸಿದ. ಇದಾದ ನಾಲ್ಕಾರುದಿನಕ್ಕೆ-ಆಗಿದ್ದ ಒಪ್ಪಂದದ ಪ್ರಕಾರ – ಅರಬರು ಕುದುರೆಗಳನ್ನು ತಾವೇ ತಂದು ರಾಜನಿಗೊಪ್ಪಿಸಿದರು. ಪಾಂಡ್ಯರಾಜ ತನ್ನ ಕಣ್ಣನ್ನು ತಾನೇ ನಂಬದಾದ. ಆದರೆ ಮೂರನೆದಿನ ಬೆಳಗ್ಗೆ ಲಾಯದಲ್ಲಿದ್ದ ಕುದುರೆಗಳೆಲ್ಲ ನರಿಗಳಾಗಿದ್ದವು. ರಾಜ ಗಾಬರಿಪಟ್ಟ. ಲಾಯದಿಂದ ಓಡಿಸಲ್ಪಟ್ಟ ನೂರಾರು ನರಿಗಳು ಮಧುರಾನಗರದ ಬೀದಿ ಬೀದಿಗಳಲ್ಲಿ ಗಲಭೆ ಮಾಡತೊಡಗಿದವು. ಇದು ಸಾಲದೆಂಬಂತೆ, ನಗರದ ಹತ್ತಿರವಿದ್ದ ನದಿಯಲ್ಲಿ ಪ್ರವಾಹ ಉಕ್ಕೇರಿಬಂತು – ಊರಿಗೆ ಅಪಾಯವಾಗುವಂತಹ ಸನ್ನಿವೇಶ ಬಂತು. ತಂತಮ್ಮ ಮನೆಗಳಿಗೆ ರಕ್ಷಣೆ ಬೇಕಷ್ಟೆ? ನಗರವಾಸಿಗಳೆಲ್ಲ ಈ ಪ್ರವಾಹ ತಡೆಯುವ ಕೆಲಸಕ್ಕೆ ಇಳಿದರು. ಪ್ರತಿಯೊಬ್ಬರೂ ಕೆಲಸಕ್ಕೆ ಬರಲೇಬೇಕೆಂದು ರಾಜಾಜ್ಞೆಯೂ ಆಗಿತ್ತು. ಆ ಸಂದರ್ಭದಲ್ಲಿ ಕೆಲಸಕ್ಕೆ ಬಾರದೆ ಉಳಿದುಕೊಂಡ ವ್ಯಕ್ತಿಯೆಂದರೆ ಮಧುರಾನಗರದ ಒಬ್ಬ ಅಜ್ಜಿ. ಆಕೆ ತಿಂಡಿ ಮಾರಿ ಜೀವನ ಸಾಗಿಸುತ್ತಿದ್ದ ಸಾಧಾರಣ ಮುದುಕಿ. ತಾನು ಕೆಲಸಕ್ಕೆ ಹೋಗಲಿಲ್ಲವೆಂದು ತಿಳಿದರೆ ರಾಜನಿಂದ ಏನು ಶಿಕ್ಷೆ ಕಾದಿದೆಯೋ–ಎಂದಾಕೆಗೆ ಭಯ; ಕೆಲಸಮಾಡಲು ತೋಳ ಬಲವಿಲ್ಲ. ಅಷ್ಟರಲ್ಲಿ ಒಬ್ಬ ಅಲ್ಲಿಗೆ ಬಂದು–ಹೊಟ್ಟೆ ತುಂಬ ತಿಂಡಿಕೊಟ್ಟರೆ–ನಾನು ನಿನ್ನ ಪಾಲಿನ ಕೆಲಸ ಮಾಡುತ್ತೇನೆಂದ !! ಅಜ್ಜಿಗೂ ಇದು ಸರಿಯೆನಿಸಿತು. ಅವನು ಕೇಳಿದಷ್ಟು ತಿಂಡಿಯನ್ನು ಕೊಟ್ಟು, ಮಣ್ಣು ಹೊರಲು ಒಂದು ಮಕ್ಕರಿಯನ್ನು ಸಹ ಅಜ್ಜಿ ಕೊಟ್ಟಳು. ಆದರೇನು? ಆ ವ್ಯಕ್ತಿ ತಾನೂ ಕೆಲಸ ಮಾಡದೆ, ಮಾಡುವವರನ್ನೂ ಮಾಡಲೀಸದೆ, ಹರಟೆ ಹೊಡೆಯ ತೊಡಗಿದ. ಇದನ್ನು ಕುದುರೆಮೇಲೆ ಕುಳಿತಿದ್ದ ರಾಜ ಗಮನಿಸಿದ. ಅವನಿಗೆ ಛಡಿಏಟು ಬಿಗಿದ. ಆ ಏಟುಗಳು ಅಲ್ಲಿ ಕೆಲಸಮಾಡುತ್ತಿದ್ದ ಸಾರ್ವಜನಿಕರಿಗೂ

ಬೀಳತೊಡಗಿದವು. ಅಷ್ಟೇ ಅಲ್ಲ, ರಾಜನಿಗೂ ಯಾರೋ ಹೊಡೆಯುತ್ತಿರುವಂತೆ ಭಾಸವಾಗಿ ಮೈ ಉರಿಯ ತೊಡಗಿತು. ದಿಗ್ಭ್ರಾಂತರಾದ ಜನ ದಿಕ್ಕಾಪಾಲಾಗಿ ಓಡ ತೊಡಗಿದರು. ಆಗ ಆ ವ್ಯಕ್ತಿ ಒಂದು ಮಕ್ಕರಿ ಮಣ್ಣು ಹಾಕಿದಕೂಡಲೇ ನದಿಯ ಅಬ್ಬರ ತಗ್ಗಿಹೋಯ್ತು. ಆ ಗಡಿಬಿಡಿಯಲ್ಲಿ ಆ ವ್ಯಕ್ತಿ ಕಣ್ಮರೆಯಾದ !! ರಾಜನಿಗೆ ಒಂದು ವಾಕ್ಯ ಕೇಳಿಬಂತು – 'ಇಷ್ಟೆಲ್ಲ ಗಡಿಬಿಡಿ ಏಕೆ ಗೊತ್ತೇ? ನನ್ನ ಭಕ್ತ ಮಾಣಿಕ್ಯವಾಚಕನ ಮಹಿಮೆಯನ್ನು ಜಗತ್ತಿಗೆಲ್ಲ ತಿಳಿಸುವುದಕ್ಕಾಗಿ.' ಮರುಕ್ಷಣದಲ್ಲಿ ಮಾಣಿಕ್ಯವಾಚಕನನ್ನು ಸೆರೆಯಿಂದ ಬಿಡುಗಡೆ ಮಾಡಿದರು. ಆತ ನಾಮ ಸಂಕೀರ್ತನೆ ಮಾಡುತ್ತ ಮಧುರೆಯ ರಾಜ ಬೀದಿಗಳಲ್ಲಿ ಓಡಾಡಲಾರಂಭಿಸಿದ. ಆತನನ್ನು ಹುಚ್ಚನೆಂದು ಹಾಸ್ಯಮಾಡುತ್ತಿದ್ದವರೆಲ್ಲ ಈಗ ಭಕ್ತಿಯಿಂದ ಕೈಮುಗಿದರು.

ಮಾಣಿಕ್ಯವಾಚಕರ್ ತನ್ನ ಜೀವನದ ಸಂಧ್ಯಾಕಾಲದಲ್ಲಿ ಚಿದಂಬರಕ್ಕೆ ಬಂದ. ಕ್ಷೇತ್ರಾಧಿಪತಿಯಾದ ನಟರಾಜಸ್ವಾಮಿ ಆತನಿಗೆ ದರ್ಶನವನ್ನು ಕರುಣಿಸಿದ; 'ನೀನೇನಾದರೂ ಬರೆದಿಡು, ಅದು ಭಾವೀ ಪೀಳಿಗೆಗೊಂದು ಅಮೂಲ್ಯನಿಧಿಯಾಗುತ್ತದೆ ರಸಧಿಯಾಗುತ್ತದೆ'ಯೆಂದು ಸ್ವಾಮಿ ಅಪ್ಪಣೆ. ಭಗವದಾಜ್ಞೆಯನ್ನು ಶಿರಸಾವಹಿಸಿ ಮಾಣಿಕ್ಯವಾಚಕ ತನ್ನ ಮಾತೃಭಾಷೆಯಾದ ತಮಿಳಿನಲ್ಲಿ ಒಂದು ಗ್ರಂಥ ಬರೆದ. ಅದರ ಹೆಸರು "ತಿರುವಾಚಕಂ". ಇದು ದೈವೀ ಸಂದೇಶ ಬೀರುವ ಗ್ರಂಥ; ಕೋಟಿಕೋಟಿ ತಪ್ತಜೀವಿಗಳಿಗೆ ಅಮೃತ ಧಾರೆಯನ್ನು ಎರೆದ ಗ್ರಂಥ; ಪದಭ್ರಷ್ಟ ಜನಕ್ಕೆ ದಾರಿ ತೋರಿದ ಗ್ರಂಥ. ತಮಿಳುನಾಡಿನಲ್ಲಿ ಇಂದಿಗೂ ಪರಮಪೂಜ್ಯವಾದ ಈ ಗ್ರಂಥ, ಆ ಸಾಹಿತ್ಯದ ಅಮೂಲ್ಯ ಮಾಣಿಕ್ಯ.

ಚಿದಂಬರ ಪಂಡಿತರಿಂದಲೂ ಸಕಲ ಕಲಾಮಂಡಿತರಿಂದಲೂ ಸುಶೋಭಿತವಾಗಿದ್ದ ಕಾಲವದು. ಅಲ್ಲಿನ ವಿವಿಧನ್ಮಣಿಗಳು ತಿರುವಾಚಕಂ ಗ್ರಂಥದ ಬಗ್ಗೆ ಸೂಕ್ತ ವಿವರಣೆ ನೀಡುವ ಕೃಪೆಯಾಗಬೇಕೆಂದು ಕೇಳಿದಾಗ, ಮಾಣಿಕ್ಯವಾಚಕರ್ ನಗುತ್ತ ನುಡಿದ – ತುಂಬ ಸಂತೋಷ; ನಾಳೆ ನಟರಾಜನ ಸನ್ನಿಧಿಯಲ್ಲಿ ಆ ಗ್ರಂಥದ ವಿವರಗಳನ್ನೆಲ್ಲ ವಿವರಿಸಿ ಹೇಳುತ್ತೇನೆ. ಈ ಸುದ್ದಿ ಕರ್ಣಾಕರ್ಣಿಯಾಗಿ ನಗರದಲ್ಲೆಲ್ಲ ಹರಡಿತು. ಪಂಡಿತರು, ಸಾರ್ವಜನಿಕರು, ಕಲಾವಿದರು ಗುಂಪುಗುಂಪಾಗಿ ದೇವಾಲಯಕ್ಕೆ ಧಾವಿಸಿ ಬರಲಾರಂಭಿಸಿದರು. ದೇವಾಲಯದಲ್ಲಿ ಮಂಗಳವಾದ್ಯಗಳು ಭೋರ್ಗರೆಯುತ್ತಿವೆ. ಆ ಕಡೆ ವೇದಘೋಷ ನಡೆಯುತ್ತಿದೆ. ಕನಕ ಸಭಾಪತಿಯಾದ ನಟರಾಜಸ್ವಾಮಿಗೆ ರುದ್ರಾಭಿಷೇಕ ನಡೆಯುತ್ತಿದೆ. ಕೈಂಕರ್ಯ ವಿಧಿಗಳೆಲ್ಲ ಸಮಾಪ್ತವಾಗುವವೇಳೆಗೆ ಕಿಕ್ಕಿರಿದ ಜನಸ್ತೋಮ ಮೀರಿತ್ತು. ಎಲ್ಲರಿಗೂ ಆಸಕ್ತಿ– ಆ ವಿಭೂತಿ ಪುರುಷನ ದಿವ್ಯವಾಣಿಯನ್ನು ಕೇಳಬೇಕೆಂದು – ಎಲ್ಲರಿಗೂ ಕುತೂಹಲ. ತಿರುವಾಚಕಂ ಗ್ರಂಥದ ಬಗ್ಗೆ ತಿಳಿದುಕೊಳ್ಳಬೇಕೆಂದು ಎಲ್ಲರಿಗೂ ಇಷ್ಟ, ಎಲ್ಲರಿಗೂ ತವಕ. ಸಭೆ ಸಹಸ್ರ ನೇತ್ರಗಳಿಂದ ಎದುರು ನೋಡುತ್ತಿದೆ. ಅಷ್ಟರಲ್ಲಿ ರುದ್ರಾಕ್ಷ ಮಾಲಾಭೂಷಿತನಾಗಿ ಮಾಣಿಕ್ಯವಾಚಕರ್ ದೇವಾಲಯದೊಳಕ್ಕೆ ಪ್ರವೇಶಿಸಿದ. ಸಭೆ ಪರಮ ಗೌರವದಿಂದ ಆತನಿಗೆ ಕೈಮುಗಿಯಿತು. ಆತನೂ ಪ್ರತಿವಂದನೆ ಸಲ್ಲಿಸಿದ. ವ್ಯಾಸಪೀಠದ ಮೇಲಿದ್ದ ಗ್ರಂಥಕ್ಕೆ ಕೈಮುಗಿದ. ದಿವ್ಯಾಲಂಕೃತನಾಗಿದ್ದ ನಟರಾಜಸ್ವಾಮಿಗೆ ವಂದಿಸಿದ.

"ಈ ಗ್ರಂಥದ ವಿವರಣೆ ಸಸ್ಪಷ್ಟವಾಗಿ ಕಂಡುಬರುತ್ತಿದೆಯಾದರೂ ತಾವು ಅದನ್ನು ನನ್ನಿಂದ ಕೇಳಬಯಸಿದ್ದೀರಿ, ಸಂತೋಷ. ಅಗೋ ಅಲ್ಲಿನೋಡಿ ತಿರುವಾಚಕಂ ಗ್ರಂಥದ ಪರಿಪೂರ್ಣ ವಿವರಣೆ–ಕಾಣುತ್ತಿದೆ."

ಉದ್ರಿಕ್ತ ಧ್ವನಿಯಲ್ಲಿ ಮಾಣಿಕ್ಯವಾಚಕರ್ ಹೇಳಿದ — ಎಲ್ಲರೂ ಚಕಿತರಾಗಿ ಆತ ತೋರಿದ ಕಡೆ ನೋಡಿದರು. ಅಲ್ಲಿ ಕಂಡದ್ದು ನಟರಾಜಸ್ವಾಮಿಯ ಪರಮ ಮಂಗಳ ಮೂರ್ತಿ !! ಮರುಕ್ಷಣದಲ್ಲಿ–ಕೋಟಿ ಮಿಂಚುಗಳ ಹೊಳಪು !! ಅಷ್ಟೆ. ಪುನಃ ಮಾಣಿಕ್ಯವಾಚಕರ್ ಕಾಣಲಿಲ್ಲ. ಆತ ಸ್ವಾಮಿಯ ಚರಣಾರವಿಂದದಲ್ಲಿ ಸೇರಿ ಹೋಗಿದ್ದ; ನಟಶೇಖರನ ಶ್ರೀ ಚರಣಗಳಲ್ಲಿ ಬಿಲ್ವದಳವಾಗಿ ಹೋಗಿದ್ದ!!

ಆನಂದ ಸಂಪ್ರವೇಲೀನಃ ಎಂಬ ಭಾಗವತದ ಮುದ್ದಾದ ಮಾತಿಗೆ ಇದಕ್ಕಿಂತ ಬೇರೆ ನಿದರ್ಶನ ಬೇಕೆ?



( ಮುಂದುವರಿದುದು )

ನಿತ್ಯಾತ್ಮ ಶುಕಯೋಗಿಯ ಭಾಗವತದಲ್ಲೂ ಹರಿಯ ವಿಶ್ವರೂಪದರ್ಶನದ ಚಿತ್ರವಿದೆ. ಸೋಮದೇವನ ಚೌಕಟ್ಟೂ ಇದೆ. ಆದರೆ ನಿತ್ಯಾತ್ಮನಿಗಿಂತ ಇಲ್ಲಿ ಸಂಕ್ಷಿಪ್ತವಾಗಿದ್ದು, ಭಕ್ತನೊಬ್ಬನ ದೈವಿಕ ಪ್ರೀತಿಯನ್ನು ಚಿತ್ರಿಸುವಲ್ಲಿ ಯಶಸ್ವಿಯಾಗಿದೆ.

ಕೃಷ್ಣ ಬಲರಾಮಸಹಿತ ಮಧುರೆಯ ಉಪವನಕ್ಕೆ ಬಂದಿಳಿದ. ಮಧುರೆಯ ಉಪವನದ ಸೌಂದರ್ಯ ವರ್ಣನೆಯನ್ನು ಕವಿ ಸೊಗಸಾಗಿ ಮಾಡಿದ್ದಾನೆ. ಈ ವರ್ಣನೆ ನಿತ್ಯಾತ್ಮನಲ್ಲಿಲ್ಲ. ಮಧುರೆಯ ಉಪವನದ ಚಿತ್ರ ನೋಡಿ, "ಪರಿಮಳದ ನೆಲೆವೀಡು, ತಂಪಿನಸಂಧಿ, ಸುಖದಾಗರ, ವಿಳಾಸದ ಪರಮಸೀಮೆ, ಮಹೋತ್ಸವದ ಮನೆ, ನಲಿವನಟರಂಗ ವಿರಹಿಗಳ ವಿಶ್ರಮ ವಿಳಾಸಿನಿಯರ ವಿಹಾರ, ವಿಶ್ವತದ ಗುರು ಶಂಕರರಿಪು ಸ್ಥಳವೆನಿಸಿಪ ವನ". ಇಲ್ಲಿ ಕೃಷ್ಣ ಪರಿವಾರದೊಂದಿಗೆ ಆಯಾಸವನ್ನು ಕಳೆದುಕೊಂಡು ಮಧುರಾಪಟ್ಟಣವನ್ನು ಪ್ರವೇಶಿಸಿದ. ಎತ್ತನೋಡಿದರತ್ತ ದೈತ್ಯಸಮೂಹ, ಕಡುಗುದುರೆಗಳ ಸಂದಣಿ, ಮದಿಸಿದ ಗಜಗಳ ಅಬ್ಬರ, ಮೊಳಗುವ ವಾದ್ಯಘೋಷ, ಸುತ್ತ ಸುಳಿವ ಅಂದಣದ ಪಲ್ಲವ ಸತ್ತಿಗೆಯ ಸಡಗರಗಳಿಂದ ಕೂಡಿದ ಮಧುರೆಯ ಪಸರ ಹರಿಯ ಚಿತ್ತವನ್ನು ಕಲಕಿತು.

ಹೀಗೆ ಮಧುರಾಪಟ್ಟಣದ ಅದ್ಭುತ ಸೌಂದರ್ಯವನ್ನು ಸವಿಯುತ್ತಾ ಬರುತ್ತಿರುವಾಗ, ಕೃಷ್ಣನಿಗೆ ಅಗಸನೊಬ್ಬ ಇದಿರಾದ. ದುಷ್ಟಗುಣಗಳ ಪ್ರತಿಮೂರ್ತಿಯಾದ ಇವನು ಒಗೆದು ಮಡಿಮಾಡಿದ ಬಟ್ಟೆಗಳ ರಾಶಿಯನ್ನು ಕಂಸನ ಅರಮನೆಗೆ ಒಯ್ಯುತ್ತಿದ್ದ. ಕೃಷ್ಣನಿಗೆ ಆ ಬಟ್ಟೆಗಳು ಬೇಕೆನಿಸಿತು. "ಕೊಡು ಸುವಸ್ತ್ರವನಂಜದಿರು, ನಾವುಡುವೊಡೊಡೆಯರು, ಮಾವ ಕಂಸನನುಡಿಯ ಮೀರದೆ ಬಿಲ್ಲ ಹಬ್ಬಕೆ ಬಂದೆವು, ಈಗ ತಡಮಾಡದೆ ಬೇಗತಾ" ಎಂದು ಕೇಳಿದ. ಕೃಷ್ಣನನ್ನೂ ಸಾಮಾನ್ಯ ಗೊಲ್ಲನೆಂದೇ ತಿಳಿದ ರಜಕನಾಡುವ ಮಾತುಗಳು ಚೆನ್ನಾಗಿವೆ, "ಚಲ್ಲೆನಾಂ ಗೋವಳಯರಿಷ್ಟಕೆ ಸಲ್ಲದವರೇ. ಮಡಿಯನುಡುವರೆ, ಬಲ್ಲಿರೆ ಸಾಮಾನ್ಯರೇ ಬಯಸಿದಿರಿ ಸಂಗತವ ಬಿಲ್ಲಹಬ್ಬಕೆ ಬಂದಿರೇ ಕಡುಹುಳ್ಳವರು, ಬಾಯ್ಬಡಿಕರು ಇದಿರಿನಲಿ ನಿಲ್ಲದಿರಿ .." ಎಂದ. ಈ ಮಾತುಗಳಿಂದ ಖತಿಗೊಂಡ ಕೃಷ್ಣ ಆ ಖೂಳನ ಮುಂದಲೆ ವಿಡಿದು, ಕೆಡೆಯೊದೆದು ಇಳೆಯೊಳಪ್ಪಳಿಸಿ ಒಡಲನ್ನು ಎರಡಾಗಿ ಸೀಳಿದ. ಅವನು ತಂದಿದ್ದ ಉತ್ತಮ ಬಟ್ಟೆಗಳಿಂದ ಬಲರಾಮಕೃಷ್ಣರು ಅಲಂಕರಿಸಿಕೊಂಡರು. ಉಳಿದುದನ್ನು ಗೋಪರು ಹಂಚಿಕೊಂಡರು.




ನಿತ್ಯಾತ್ಮನ ಭಾಗವತದಲ್ಲಿ ಚಿತ್ರಿತವಾಗಿರುವ 'ರಜಕವಧೆ'ಯ ಚಿತ್ರ ಸೋಮದೇವನಿಗಿಂತ ಚೆನ್ನಾಗಿದೆ ಮತ್ತು ಸುಸಂಬದ್ಧವಾಗಿದೆ. ದುಷ್ಟಶಿಕ್ಷಕ ಭಗವಂತ ಎಂದು ತೋರಲು ಕವಿ ಈ ಚಿತ್ರಣವನ್ನು ತಂದಿದ್ದರೂ, ಸೋಮದೇವನ ಈ ಸಂದರ್ಭದ ಕೃಷ್ಣ ಸ್ವಂತ ಇಚ್ಛೆಗೆ ವಿರೋಧಿಸುವವರನ್ನು ದಮನಮಾಡುವ ಸರ್ವಾಧಿಕಾರಿಯಂತೆ ಕಾಣುತ್ತಾನೆ. ಆದರೆ ನಿತ್ಯಾತ್ಮ, ಕೃಷ್ಣ ರಜಕನೊಂದಿಗೆ ತೋರುವ ಹಾಸ್ಯ, ಪ್ರತಿಯಾಗಿ ರಜಕ ತೋರಿದ ಖೂಳತನ, ಅಹಂಕಾರಪ್ರವೃತ್ತಿ ಇತ್ಯಾದಿಗಳನ್ನೆಲ್ಲ ಚೆನ್ನಾಗಿ ಚಿತ್ರಿಸಿ, ಕೃಷ್ಣ ಏಕೆ ರಜಕನನ್ನು ಕೊಲ್ಲಬೇಕಾಯಿತೆಂಬುದನ್ನು ಸಮರ್ಥವಾಗಿ ಚಿತ್ರಿಸುತ್ತಾನೆ. ಸೋಮದೇವನಲ್ಲಿ ಹಾಗಿಲ್ಲ.

ಶ್ರೀಮತಿ ಎನ್. ಪುಷ್ಪ

ಕೃಷ್ಣ ತನ್ನ ಪರಿವಾರದೊಡನೆ ಮುಂದೆ ಸಾಗುತ್ತ ಮಾಲೆಗಾರರ ಕೇರಿಗೆ ಬಂದ. ಇಲ್ಲಿಗೆ ಒಡೆಯ ಕೃಷ್ಣಭಕ್ತನಾದ ಸುದಾಮ. ತನ್ನ ಅಧಿದೈವವನ್ನು ಕಂಡೊಡನೆ 'ತಳಿಗೆ ಮಾಣಿಕ ಸಿಲುಕಿತಂಗೈತಳಕೆ ಬಂದುದು ಹರುಷ ವಾಂಛಿತ ಫಲಿಸಿತಿಹಪರಸಿದ್ಧಿ ಯಾಕೃತಿವೆತ್ತುದಿಂದೆನಗೆ' ಎನ್ನುತ್ತ ಆತನ ಪಾದಕ್ಕೆ ಬಿದ್ದು, ಅವನ ಮಹಿಮೆಯನ್ನು ಕೊಂಡಾಡಿದ. ಮಲ್ಲಿಗೆ ಸುರಗಿ ಮೊದಲಾದ ಹೂಮಾಲೆಗಳಿಂದ ಹರಿಬಲರಾಮರನ್ನು ಅಲಂಕರಿಸಿ, ತುಳಸಿ, ವೈಜಯಂತಿಮಾಲೆಗಳನ್ನು ಹಾಕಿ, ಕರ್ಪುರ, ವೀಳೆಯ ಮತ್ತು ಆರತಿಯನ್ನು ನಿವಾಳಿಸುತ್ತ, ಸುರವಾಳಿಮಣಿ ಮುಕುಂದನನ್ನು ಲಾಲಿಸಿದ, ಸುಧಾಮನ ಭಕ್ತಿಗೆ ಮೆಚ್ಚಿದ ಹರಿ "ಸವೆಯದ ಸಿರಿಪದವಿಯನಿತ್ತು ಅಮರತ್ವ ಉಂಟಾಗುವಂತೆ ಆಶೀರ್ವದಿಸಿ, ಹರ್ಷದಿಂದ ಬಿಗದಪ್ಪಿ ಆದರ ರಸೋಕ್ತಿಯಿಂದ ನುಡಿಸಿದ".

ಸೋಮದೇವನ ಕಾವ್ಯದಲ್ಲಿ ಕೃಷ್ಣನ ಆದರಕ್ಕೆ ಪಾತ್ರಳಾದ ಮತ್ತೊಂದು ವ್ಯಕ್ತಿಯೆಂದರೆ ಸೈರೇಂಧ್ರಿ. ಅತ್ಯಂತ ಸುಂದರಿಯಾಗಿದ್ದೂ ಈಕೆಗಿದ್ದ ಒಂದು ಊನವೆಂದರೆ ದೇಹ ಮುರುಡುಗೊಂಡಿದ್ದು. ಕಂಸನ ಅರಮನೆಯ ರಾಜಮಾರ್ಗದಲ್ಲಿ ಕೃಷ್ಣನಿಗೆ ಎದುರಾದ ಈಕೆ ಗಂಧವನ್ನು ತುಂಬಿದ್ದ ಪೊಂಬಟ್ಟಲೊಂದನ್ನು ಹಿಡಿದು ಕಂಸನ ಅರಮನೆಗೆ ಹೋಗುತ್ತಿದ್ದಳು. ಇವಳ ಊನವನ್ನು ಕಂಡು ಕೃಷ್ಣನಿಗೆ ವ್ಯಥೆಯಾಗಿರಬೇಕು. ಆಕೆಯನ್ನು ತಡೆದು ನಿಲ್ಲಿಸಿ, ನೀನಾರು ತರುಣಿ ? ಆ ಪರಿಮಳ ಯಾರಿಗಾಗಿ ? ಎಂದು ಕೇಳಿದ ಆಕೆಗೆ ಕೃಷ್ಣನನ್ನು ನೋಡಿಯೇ ದೈವತ್ವದ ಭಾವ ಉದಿಸಿರಬೇಕು. ಕೃಷ್ಣ ಕೇಳಿದೊಡನೆ 'ನಿಮಗೆ' ಎಂದುಬಿಟ್ಟಳು. ಅಲ್ಲದೆ ಹರಿಬಲರ ಪಾದಕ್ಕೆರಗಿ, ಬಟ್ಟಲಲ್ಲಿದ್ದ ನವವಿಧಗಂಧವನ್ನು ಅವರಿಬ್ಬರ ಅಂಗಗಳಿಗೆ ಶ್ರದ್ಧೆಯಿಂದ ಲೇಪಿಸಿದಳು. ಕೃಷ್ಣ ಅವಳು ತೋರಿದ ಪ್ರೀತಿ, ಶ್ರದ್ಧೆಗಳಿಗೆ ಮೆಚ್ಚಿ ಮುರುಡುಗೊಂಡಿದ್ದ ಅವಳ ದೇಹವನ್ನು ನೇರಗೊಳಿಸಿ, ಅವಳ ಚೆಲುವನ್ನು ಇಮ್ಮಡಿಗೊಳಿಸಿದ.

ಸೈರೇಂಧ್ರಿಯನ್ನು ಕೃಷ್ಣ ಅನುಗ್ರಹಿಸುವ ಚಿತ್ರ ಸೋಮದೇವನಿಗಿಂತ ನಿತ್ಯಾತ್ಮನಲ್ಲಿ ಜೀವಂತವಾಗಿದೆ. ರೂಪವತಿಯಾಗಿದ್ದೂ, ಮುರುಡುಗೊಂಡಿದ್ದ ತನ್ನ ದೇಹದ ಬಗ್ಗೆ ಸೈರೇಂಧ್ರಿಗಿದ್ದ ಕೊರಗು, ಅವಳ ಸ್ಥಿತಿಯನ್ನರಿತ ಕೃಷ್ಣನ ವ್ಯಥೆ, ಸೈರೇಂಧ್ರಿ – ಕೃಷ್ಣರ ಸರಸಸಂಭಾಷಣೆ, ಕೃಷ್ಣ ಮಾತಿನಲ್ಲಿ ತೋರುವ ನಯ, ಕೃಷ್ಣನ ಮೇಲೆ ಅವಳು ತೋರುವ ಪ್ರೀತಿ – ಇತ್ಯಾದಿಗಳೆಲ್ಲ ನಿತ್ಯಾತ್ಮನಲ್ಲಿ ಶಕ್ತವಾಗಿ, ನಾಟಕೀಯವಾಗಿ, ಹೃದ್ಯವಾಗಿ ಚಿತ್ರಿತಗೊಂಡಿದೆ. ಸೋಮದೇವನಲ್ಲಿ ನಿತ್ಯಾತ್ಮನಷ್ಟು ಸೊಗಸಿಲ್ಲ.

ಸೈರೇಂಧ್ರಿಗೆ ಅನುಗ್ರಹ ನೀಡಿದ ಬಳಿಕ ಕೃಷ್ಣ ಬಲರಾಮರು ಕಂಸನ ಅರಮನೆಯ ಬಳಿಗೆ ಬಂದರು. ಇಲ್ಲಿಂದ ಮುಂದೆ ಕಾವ್ಯ ಕೊನೆಯ ಹಂತ ತಲುಪುತ್ತದೆ. ಕಂಸನ ಅರಮನೆಯನ್ನು ಪ್ರವೇಶಿಸಿದ ನಂತರ, ಕಂಸನ ಆಯುಧಾಗಾರವನ್ನು ಕೃಷ್ಣ ಬಲರಾಮರು ಪ್ರವೇಶಿಸಿದರು. ಆ ಶಸ್ತ್ರಮಂಟಪದ ಶೃಂಗಾರದ ಸೊಗಸನ್ನೂ, ವಿವಿಧ ಆಯುಧಗಳನ್ನು ನೋಡುತ್ತ ಕಂಸನ ಧನುವಿನ ಬಳಿಗೆ ಬಂದರು. ಕಂಸನ ಬಿಲ್ಲನ್ನು ಕಂಡು ಮೆಚ್ಚಿದ ಕೃಷ್ಣ "ಇದು ವಾಸವಾದ್ಯರ ಗೆಲಿದ ಧನುವೇ ತಪ್ಪದು ಅಲ್ಲದೊಡೀ ಸುವಿಸ್ತಾರವುಳ್ಳ

ಶಪ್ರತ್ಕೆಲ್ಲ" ಎನ್ನುತ್ತ ಅದನ್ನು ಕ್ಷಣಮಾತ್ರದಲ್ಲಿ ಎತ್ತಿ ಬಾಗಿಸಿ ತಿರುವನ್ನು ಕೆಪ್ಪಿಗೆ ಕಟ್ಟಿ, ಒಂದು ಸಲ ಜೊಬ್ಬಿರಿದ. ಬಿಲ್ಲು ಮೂರುಲೋಕವೂ ತಲ್ಲಣಿಸುವಂತ ಮಹಾಧ್ವನಿಮಾಡಿ ಮುರಿದು ಬಿತ್ತು. ಈ ಧ್ವನಿಯಿಂದ ಕಂಸನ ಎದೆಗುಂದಿತು. ಕಂಪಿಸುತ್ತ, ಬೀಳುತ್ತ, ಏಳುತ್ತ, ಬೆಚ್ಚುತ್ತ, ಮಂತ್ರಿಗಳೊಂದಿಗೆ ಬಹಳಹೊತ್ತು ಆಲೋಚಿಸಿ, ಕಡೆಗೆ ನಂದತನಯರನ್ನು ಪಟ್ಟದಾನೆಯ ಕೈಯಿಂದ ಸೀಳಿಸಿ ತಂದು ತೋರಿ ಎಂದು ಆಜ್ಞೆಮಾಡಿದ.

ಕೃಷ್ಣ ಬಲರಾಮರ ವಧೆಗಾಗಿ ಕಂಸ ಸಿದ್ಧಪಡಿಸಿದ ಪಟ್ಟದಾನೆ ಕುವಲಯಾಪೀಡನ ಚಿತ್ರವಿದು – "ದಾಡೆಯಲಿ ಜವನೆದೆಯನಿಬ್ಬಗೆ ಮಾಡಿ ಸೀಳುವ, ಸುರಗಿರಿಯ ಮಂಡಾಡಿ ಕೆಡಹುವ, ರವಿರಥವ ಸುಂಡಿಲಲಿ ಬರಸೆಳೆವ, ನೋಡಿ ತವಕಿಸುವ ಆನೆಕಾಲರ ಹೇಡಿಗೊಳಿಸುವ, ನೆಳಲ ರಿಪುವೆಂದೀಡಿರಿವ ಕೋಪದಲಿ ಗಜವಿರೆ ಕಂಡನ ಸುರಾರಿ". ನೀಲಗಿರಿಯೊ ತಿಮಿರರಾಜನ ಜಾಲವೊ ಕಾಲಕೂಟದ ಕಡಲೊ, ಅಸುರನ ಸಿಂಧವೊ ಎಂಬಂತಿದ್ದ, ಮಹೋಗ್ರರೂಪಿಯಾದ ಕುವಲಯಾಪೀಡ ಥಳಥಳಿಪ ದಾಡೆಗಳನ್ನು ಮಸೆಯುತ್ತ, ಕಪೋಲದಲ್ಲಿ ಮದರಸವನ್ನು ಸುರಿಸುತ್ತ, ಶತ್ರುವಿನ ಆಗಮನವನ್ನೇ ಕಾಯುತ್ತಾ ಸಿದ್ಧವಾಗಿ ನಿಂತಿತ್ತು. ಏನಾದರೇನು? ಸಕಲ ಚರಾಚರಗಳನ್ನು ಹೆತ್ತ ತಂದೆಯ ತಂದೆಯಾದ ಹರಿಯ ಮುಂದೆ ಅದರದೇನು ಆಟ? ಹರಬಲರ ಮುಂದೆ ಹೋರಾಡಲಾಗದೆ, ಕೃಷ್ಣನ ಹೋರಾಟದ ತಂತ್ರಗಳಿಗೆ ಸೋತು, ನೆಲಕ್ಕೊರಗಿತು.

ಕುವಲಯಾಪೀಡನ ಸಾವಿನಿಂದ ರೊಚ್ಚಿಗೆದ್ದ ಖಳದೈತ್ಯರು ಕೃಷ್ಣನೆಡೆಗೆ ನುಗ್ಗಿಬಂದರು ಆದರೆ ಕೃಷ್ಣ ಬಲರಾಮರ ಕೋಪಾಗ್ನಿಯ ಮುಂದೆ ಭಸ್ಮವಾದರು. ಈ ಸಂದರ್ಭವನ್ನೆ ಸಾಧಿಸಿ, ಕಂಸ ನಿಯೋಜಿಸಿದಂತೆ ಚಾಣೂರ, ಮುಷ್ಟಿಕರೆಂಬ ಮಲ್ಲರು ಹರಿ ಬಲರಾಮರ ಮೇಲೆ ಎರಗಿದರು. ಎರಡು ಜೋಡಿಗೂ ಮಲ್ಲಯುದ್ಧ ಆರಂಭವಾಯಿತು. ಈ ಯುದ್ಧವನ್ನು ನೋಡಲು ಇಡೀ ಮಥುರೆಯೇ ನೆರೆದಿತ್ತು. ಈ ಮಧ್ಯೆ ಕೃಷ್ಣ ತಂದೆ ತಾಯಿಯರನ್ನು ನೋಡಿದ. ಫಲರಹಿತ ಕುಜದಂತೆ, ಬತ್ತಿದ ಕೊಳನಂತೆ, ಸಾಹಸವಳಿದ ಪಟುಭಟನಂತೆ ವಸುದೇವನೂ, ಅವನ ಎಡಭಾಗದಲ್ಲಿ ಮುತ್ತಿ ಮುಸುಕಿದ ಭೀತಿಯಲ್ಲಿ ಕೊಂಗಿದ ಮುಖದ, ಕಾತರಿಸುವ ಕಣ್ಗಳ, ತೊದಲು ಮಾತಿನ, ನಡುಗುವದೇಹದ ದೇವಕಿಯೂ ಕುಳಿತಿದ್ದರು. ಇಬ್ಬರನ್ನೂ ಕಂಡ ಕೃಷ್ಣನಿಗೆ ಕಣ್ತುಂಬಿ ಬಂತು. ತನ್ನಿಂದ ತಾಯ್ತಂದೆಗಳಿಗೊದಗಿದ ದುಃಸ್ಥಿತಿಗೆ ಮರುಗಿದ. ಅವರ ದುಃಖವನ್ನು ಕೊನೆಗೊಳಿಸಲು ಮನಸ್ಸುಮಾಡಿ ಬಲರಾಮನೊಂದಿಗೆ ಚಾಣೂರ ಮುಷ್ಟಿಕರ ಬಳಿಗೆ ಬಂದ. ಇವರನ್ನು ನೋಡಿ ದುಷ್ಟರಿಬ್ಬರೂ ಅಬ್ಬರಿಸುತ್ತ ಕಡುಗೋಪದಿಂದ, ಗಂಡುಗಲಿಗಳಾದ ಹರಿ ಬಲರ ಧೈರ್ಯವನ್ನು ಕೆಣಕಿದರು. ಒಡನೆಯೆ ಯುದ್ಧಾರಂಭವಾಯಿತು. ಹರಿಯೊಡನೆ ಚಾಣೂರ, ಬಲರಾಮನೊಂದಿಗೆ ಮುಷ್ಟಿಕರು "ಶರಧಿ ಶರಧಿಯ ಹಳಚ ದಂತಿತಿ" ಕಾದಿದರು. ಗಾಳಿಯೆದುರು ಘನಚಾಳವ ನಿಲುವುದೇ? ಆ ಇಬ್ಬರು ಮಲ್ಲರು "ಸೊಕ್ಕಿದಿಭ ಸರಸಿರುಹವನದೊಳಗೊಕ್ಕಲಿಕ್ಕುವ ಮಾಳ್ಕೆಯಲಿ" ಹರಿ ಬಲರಿಂದ ಕೆಡವಲ್ಪಟ್ಟರು.

ಕುವಲಯಾಪೀಡ ಹಾಗೂ ಚಾಣೂರ ಮುಷ್ಟಿಕರೊಂದಿಗಿನ, ಹರಿ ಬಲರಾಮರ ಯುದ್ಧದ ಚಿತ್ರಣ ನಿತ್ಯಾತ್ಮನಲ್ಲಿ ಸಪ್ಷೆಯಾಗಿದ್ದು ಸಂಕ್ಷಿಪ್ತವಾಗಿದೆ. ಸೋಮದೇವನ ಈ ಭಾಗ ಶಕ್ತವಾಗಿದೆ. ವೀರ, ಕ್ರೋಧ ಭಾವಗಳಿಗೆ ತಕ್ಕ ಭಾಷೆಯನ್ನು ಕವಿ ಸಮರ್ಥವಾಗಿ ಬಳಸಿ, ಶಬ್ದಗಳಿಗಾದ ಯುದ್ಧದ ಕ್ರಮವನ್ನು ಆಕರ್ಷವಾಗಿ ಚಿತ್ರಿಸಿದ್ದಾನೆ.

ಮಲ್ಲರಿಬ್ಬರ ಸೋಲನ್ನು ಕಂಡ ಕಂಸನ ಸ್ಥಿತಿಯಿದು "ಆತವಕದಗ್ರದಲಿ ಮುಸುಕಿದ ಭೀತಿಯಲಿ ಸಿಗ್ಗಾಗಿ, ಕಂಗೆಟ್ಟು, ಆತುರಿಸಿ, ಜವಗುಂದಿ ಕಳವಳಿಸುತ ವಿಕಾರದಲಿ ಮಾತನಾಡುತ ಮರೆದು. ನಿಮಿಷಕೆ ಚೇತರಿಸಿ, ಹಲುಮೊರೆದು ಮರುಗಿದ ಈ ಸ್ಥಿತಿಯಲ್ಲಿದ್ದ ಮಾತುಳನನ್ನು ಕಂಡು ಹರಿ "ಬಿದ್ದುದಗ್ಗದ ದಂತಿ ಮಲ್ಲರು ಹದ್ದುಕಾಗೆಗೆ ಬೋನವಾದರು, ಹೊದ್ದಲಮ್ಮರು ನಿನ್ನ ಕಾಹಿನ ವೀರ ಪರಿವಾರ ಬಿದ್ದಿನರನುಪಚರಿಸು ಬಾ ನೇಲಿದ್ದು ನೋಡುವುದುಚಿತವಲ್ಲ" ಎಂದು ಹಂಗಿಸಿ, ಕೂಗಿ ಕರೆದ, 'ಮಾವ, ಕೇಳು, ನಾವು ನಿನ್ನ ತಂಗಿಯಾದ ದೇವಕಿಯ ಸುತರು, ನೀನು ಕರೆದು ನಾವು ಬಂದೆವು. ನಮ್ಮ ಕೊಬ್ಬಿನಲಿ ಲಾವಕರ ನುಡಿ ಕೇಳ ಕೊಲಿಸದೆ ಕಾವುದು ಒಳಿತು, ನಾವು ಬಂದೆರೆಗುವಡೆ ನೀವಿಹಠಾವೆಮಗೆ ವಶವಲ್ಲ, ಸೋದರ ಮಾವನಾಗಿ ನಿನಗೆ ನಮ್ಮ ಮೇಲಿನಿತಿಲ್ಲ ಕೃಪೆ' – ಇತ್ಯಾದಿ ಕಟಕಿಗಳನ್ನಾಡಿ ನಾನಾ ಛಂದದಲಿ ಮೂದಲಿಸಿರೆ "ತ್ರಿಪುರವನೊಂದು ಸರಳಿಂದುರುಪಿದ ಉಗ್ರರೂಪನ ಕೈಕೊಂಡು ಹಿಂದೆ ನೆನೆದುರಿವೆದ್ದು ಮನದಲಿ ನೊಂದೊದಂಪುಟ ನೆಗೆದು ಪಾರಿದನಿಂದುಬಿಂಬವ ರಾಹು ಮೊಗೆದರೆಯಟ್ಟುವಂದದಲಿ". ಹಾರಿದ್ದೆಖಳನಾದ ಕಂಸನ ಮುಂದಲೆಯನ್ನು ಹಿಡಿದು ಕೆಳಗುರುಳಿಸಿ, ಅವನ ಮೇಲೆಯೇ ಧುಮ್ಮಿಕ್ಕಿದ. ಹರಿಯ ಬಲದ ಮುಂದೆ ತತ್ತರಿಸಿದ ಕಂಸ "ಅರೆ ಮರಳುವಕ್ಷಿಗಳ, ಕೆದರಿದ ಕುರುಳ ಹೊಯ್ಪುಳ್ಳೆಗಳ ಮೇಲುಸುರುರವಣೆಯ ನಾಸಿಕದ ಹಾಯ್ಸುವ ಕೊರಳ ನೀರ್ದೆಗೆದು ಹೊರಳವಿಹ ನಾಲಗೆಯ ನೆತ್ತರು ಸುರಿವ ಕಾಯದವನಾಗಿ" ಕೃಷ್ಣನ ಚರಣಪಂದುಗೆಯಂತೆ ಕಂಡ.

ದುಷ್ಟಕಂಸನ ವಧೆಯ ನಂತರ, ಕಂಸನ ತಂದೆ ಉಗ್ರಸೇನನನ್ನು ಸೆರೆಯಿಂದ ಬಿಡಿಸಿ, ಕೃಷ್ಣ ಮತ್ತೆ ಪಟ್ಟ ಕಟ್ಟಿದ. ತನ್ನ ಭಕ್ತನಾದ ಅಕ್ರೂರನನ್ನು ಮಂತ್ರಿಯಾಗಿ ನೇಮಿಸಿದ. ದೇವಕಿ ವಸುದೇವರು ಚಿತ್ತಕ್ಷೋಭೆಯನ್ನು ಕಳೆದು ಕೊಂಡು ಹರ್ಷಚಿತ್ತರಾದರು. ಮಥುರೆಯ ಜನರೆಲ್ಲ ಆನಂದದಿಂದ, ನಿರ್ಭಯವಾಗಿ ಬದುಕುವಂತಾಯ್ತು.

ಭಾಮಿನೀ ಷಟ್ಪದಿಯಲ್ಲಿ ರಚಿತವಾಗಿರುವ ಅಕ್ರೂರ ಚರಿತ್ರೆ ಒಂದು ಭಕ್ತಿಕಾವ್ಯ. ಮೊದಲೇ ಹೇಳಿದಂತೆ ಕೃಷ್ಣನ ಹಾಗೂ ಅವನ ಭಕ್ತರ ಮಹಿಮಾತಿಶಯವನ್ನು ಹೇಳುವ ಕವಿಯ ಅಲೌಕಿಕ ಉದ್ದೇಶವನ್ನು ಕಾವ್ಯದಲ್ಲಿ ಗುರ್ತಿಸಬಹುದು. ಕಥೆ ಚಿಕ್ಕದಾದರೂ ರಸವತ್ತಾದ ಅನೇಕ ಭಾಗಗಳಿಂದ ಕೂಡಿದ ಕಾವ್ಯ ಓದುಗರ ಗಮನ ಸೆಳೆಯುವುದರಲ್ಲಿ ಆಶ್ಚರ್ಯವಿಲ್ಲ. ಕವಿಯ ಶೈಲಿಯ ಬಗ್ಗೆ ಹೇಳುವಾಗ, ಈಗಾಗಲೇ ಅನೇಕ ವಿದ್ವಾಂಸರು ಗುರ್ತಿಸಿರುವಂತೆ ಸೋಮದೇವನ ಶೈಲಿಯ ಮೇಲೆ ಕುಮಾರವ್ಯಾಸನ ಪ್ರಭಾವ ದಟ್ಟವಾಗಿರುವುದನ್ನು ಗುರ್ತಿಸಬಹುದು. ಅಲ್ಲದೆ ಕವಿಯೇ ತನ್ನ ಕೃತಿಯ ಮೊದಲ ಸಂಧಿಯಲ್ಲಿ ಕುಮಾರವ್ಯಾಸನನ್ನು ಸ್ಮರಿಸಿ ಹೊಗಳಿದ್ದಾನೆ. ಕುಮಾರವ್ಯಾಸನಂತೆಯೇ ಈತನೂ ಕೆಲವೆಡೆ ಶ್ಲೇಷೆ ಮೊದಲಾದ ಅಲಂಕಾರಗಳನ್ನು ಸಮರ್ಥವಾಗಿ ಬಳಸಿದ್ದಾನೆ. ಕೆಲವೆಡೆ ಪಾಂಡಿತ್ಯ ಪ್ರದರ್ಶನ ಮಾಡಿರುವುದೂ ಉಂಟು. ಸೋಮದೇವನ ಶೈಲಿಯಲ್ಲಿ ಕುಮಾರವ್ಯಾಸನ ಧ್ವನಿಯೇ ಅನುರಣನಗೊಂಡಂತೆ ಅನಿಸಿದರೂ, ಕವಿಯಲ್ಲೂ ಸ್ವಂತಿಕೆಯಿರುವುದು ಮೆಚ್ಚಬೇಕಾದ ಅಂಶ. ಈ ಕಾವ್ಯದ ಮತ್ತೊಂದು ಆಕರ್ಷಣೀಯ ಗುಣವೆಂದರೆ ಕವಿಯ ವರ್ಣನಾ ಸಾಮರ್ಥ್ಯ. ಈತನ ಅನೇಕ ವರ್ಣನೆಗಳು ಸ್ವಭಾವೋಕ್ತಿಗೆ ಉತ್ತಮ ಉದಾಹರಣೆಗಳಾಗಿವೆ. ಅಲ್ಲದೆ ಕಾವ್ಯದಲ್ಲಿ ಅಪರೂಪಕ್ಕೆ ಬರುವ ಸೂರ್ಯೋದಯ, ಚಂದ್ರೋದಯಗಳ ವರ್ಣನೆಗಳು ಕಾವ್ಯದ ಉದ್ದೇಶಕ್ಕೆ ಪೂರಕವಾಗಿ ದುಡಿದಿದೆ. ಇಷ್ಟಾದರೂ ಕೆಲವು ಅನೌಚಿತ್ಯವರ್ಣನೆಗಳು ನುಗ್ಗಿಬಂದು ಕಾವ್ಯೋದ್ದೇಶಕ್ಕೆ ಭಂಗ ತಂದಿವೆ. ಉದಾ: ಕವಿ ಕೃಷ್ಣನಿಗೆ ದರ್ಶನ ಮಾಡಿಸುವ ಸೂಳೆಗೇರಿಯ ವರ್ಣನೆ. ಅಂತೂ ಕನ್ನಡದ ಭಾಗವತಕವಿಗಳ ಸಾಲಿನಲ್ಲಿ ಸೋಮದೇವನಿಗೊಂದು ವಿಶಿಷ್ಟ ಸ್ಥಾನವಿರುವುದು ಖಚಿತ.

---

# ವಾರ್ತಾವಳಿ

## ಉಡುಪಿಯಲ್ಲಿ ಶ್ರೀಕೃಷ್ಣ ಪ್ರತಿಷ್ಠಾಪನೆಯ ಏಳುನೂರನೇ ವಾರ್ಷಿಕೋತ್ಸವ

ಉಡುಪಿಯಲ್ಲಿ ಲೋಕಪ್ರಸಿದ್ಧವಾದ ಕಡೆಗೋಲು ಕೃಷ್ಣನ ಪ್ರತಿಷ್ಠಾಪನೆಯ 700 ನೇ ವಾರ್ಷಿಕೋತ್ಸವವು 1985ರ ಜನವರಿ ತಿಂಗಳಿನಲ್ಲಿ ವೈಭವದಿಂದ ನಡೆಯಲಿದೆಯೆಂದು ವರದಿಯಾಗಿದೆ.

ಉಡುಪಿಯ ದೇವಾಲಯದ ಪ್ರಸ್ತುತ ಪರ್ಯಾಯದ ಸ್ವಾಮಿಗಳಾದ ಪೇಜಾವರದ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರು ಈ ವಿಷಯವನ್ನು ಪ್ರಕಟಿಸುತ್ತ ಶ್ರೀಮದಾನಂದ ತೀರ್ಥರು 13ನೇ ಶತಕದಲ್ಲಿ ಸಮುದ್ರದಿಂದ ತಂದ ಗೋಪೀಚಂದನದ ಗಟ್ಟಿಯಲ್ಲಿದ್ದ ಶ್ರೀಕೃಷ್ಣ ವಿಗ್ರಹವನ್ನು ಉಡುಪಿಯಲ್ಲಿ ಪ್ರತಿಷ್ಠಿಸಿದ 700 ವರ್ಷದ ಉತ್ಸವದಲ್ಲಿ ಹಲವಾರು ಸಾಮಾಜಿಕ ಧಾರ್ಮಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆಯೆಂದು ತಿಳಿಸಿದರು.

1985 ಜನವರಿ 14 ರಂದು ಉತ್ಸವದ ಉದ್ಘಾಟನೆಯಾಗಿ ಕೃಷ್ಣಭಕ್ತ ಸಮ್ಮೇಳನವು ನಡೆಯುವುದೆಂದೂ, ವಿವಿಧ ಮಧ್ವ ಮಠಗಳ ಪೀಠಾಧಿಪತಿಗಳೂ, ಚೈತನ್ಯವಲ್ಲಭ ಸಂಪ್ರದಾಯಿಗಳೂ, ವಿಚಾರಸಂಕಿರಣಗಳಲ್ಲಿ ಪಾಲುಗೊಳ್ಳುವರೆಂದೂ ಹೇಳಲಾಗಿದೆ. ಇತರ ಮಠಾಧಿಪತಿಗಳನ್ನೂ ಆಹ್ವಾನಿಸುವ ಕಾರ್ಯ ನಡೆದಿದ್ದು ಹಲವಾರು ಸಾಂಸ್ಕೃತಿಕ ಕಾರ್ಯಕ್ರಮಗಳನ್ನೂ ತತ್ಸಂಬಂಧದಲ್ಲಿ ಹಮ್ಮಿಕೊಳ್ಳಲಾಗಿದೆ.

ಈ ಸಂದರ್ಭದಲ್ಲಿ ಶ್ರೀಕೃಷ್ಣ ದೇವಾಲಯದ ಶ್ರೀ ಚೆನ್ನಕೇಶವ ದ್ವಾರದಲ್ಲಿ ಬೆಳ್ಳಿಯ ಮಂಟಪ ನಿರ್ಮಾಣ, ದೇವಾಲಯದ ಒಳಗೋಡೆಗಳ ನವೀಕರಣ, ಉತ್ಸವ ಮೂರ್ತಿಗಳಿಗಾಗಿ ಚಿನ್ನದ ಪಾಣಿಪಟ್ಟ, ಹೊಸ ಊಟದ ಕೊಠಡಿಗಳ ನಿರ್ಮಾಣ, ಅನಾಥಮಕ್ಕಳಿಗಾಗಿ ಒಂದು ಅನಾಥಾಲಯವನ್ನೂ ನಿರ್ಮಿಸುವ ಯೋಜನೆಗಳಿವೆ ಎಂದು ವರದಿಯಾಗಿದೆ.

## ತಿರುಮಲೆಯಲ್ಲಿ ನೂತನ ಪ್ರಧಾನ ಮಂತ್ರಿ ಶ್ರೀ ರಾಜೀವ್‌ಗಾಂಧಿ

ಭಾರತದ ನೂತನ ಪ್ರಧಾನ ಮಂತ್ರಿ ಶ್ರೀ ರಾಜೀವಗಾಂಧಿಯವರು ದಿನಾಂಕ 2-12-84 ರಂದು ಬೆಳಗ್ಗೆ ತಿರುಮಲೆಗೆ ಆಗಮಿಸಿ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿ ಸ್ವಾಮಿಯನ್ನು ಆರಾಧಿಸಿದರು.

ಚಿತ್ತೂರು ಜಿಲ್ಲಾಧಿಕಾರಿ, ತಿ. ತಿ. ದೇವಸ್ಥಾನಗಳ ಹೊಸ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಮೊದಲಾದವರು ಆಲಯ ಮರ್ಯಾದೆಗಳೊಡನೆ ಪ್ರಧಾನಿಯನ್ನು ಸ್ವಾಗತಿಸಿ;ದೇವಾಲಯದ ಇತಿಹಾಸ,ತಿ.ತಿ.ದೇಗಳ ಮಾನವ ಸೇವಾಯೋಜನೆಗಳನ್ನು ವಿವರಿಸಿದರು.

## ತಿರುಮಲೆಯಲ್ಲಿ ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮಾರಾವ್

ಆಂಧ್ರ ಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮಾರಾವ್ ಅವರು ತಿರುಮಲೆಯನ್ನು ಡಿಸೆಂಬರ್ ಆರರಂದು ತಲುಪಿ ಶ್ರೀ ವೆಂಕಟೇಶ್ವರಸ್ವಾಮಿಯನ್ನು ದರ್ಶಿಸಿ ಆರಾಧಿಸಿದರು.

ಆಲಯ ಮರ್ಯಾದೆಗಳೊಂದಿಗೆ ಅವರನ್ನು ಸ್ವಾಗತಿಸಿದ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಹಾಗೂ ಮತ್ತಿತರ ಅಧಿಕಾರಿಗಳು ಅವರಿಗೆ ದೇವಾಲಯದ ವಿವಿಧ ಸೇವಾ ಸೌಕರ್ಯಗಳನ್ನು ವಿವರಿಸಿದರು. ಆಂಧ್ರಪ್ರದೇಶದ ವಿದ್ಯಾಶಾಖಾ ಮಂತ್ರಿ ಶ್ರೀ ಮುದ್ದು ಕೃಷ್ಣನಾಯುಡು ಅವರೂ ಮುಖ್ಯಮಂತ್ರಿಗಳೊಂದಿಗೆ ಆಗಮಿಸಿದ್ದರು.

## ರಾವುಲ ಸೂರ್ಯನಾರಾಯಣ ಮೂರ್ತಿ ಅವರಿಗೆ ಡಿ. ಲಿಟ್ ಪ್ರಶಸ್ತಿ

ತಿರುಮಲೆ ತಿರುಪತಿ ದೇವಸ್ಥಾನಗಳ ಪೌರ ಸಂಬಂಧಾಧಿಕಾರಿ ಶ್ರೀ ರಾವುಲ ಸೂರ್ಯನಾರಾಯಣ ಮೂರ್ತಿ ಅವರ 'ರೂರಲ್ ರಿಸರ್ಜೆನ್ಸ್ ಇನ್ ಇಂಡಿಪೆಂಡೆಂಟ್ ಇಂಡಿಯಾ' ಎಂಬ ಆಂಗ್ಲ ಪ್ರೌಢಪ್ರಬಂಧಕ್ಕೆ ಅಮೆರಿಕಾದ ಟೆಕ್ಸಾಸ್‌ನ ಮುಕ್ತ ವಿಶ್ವ ವಿದ್ಯಾಲಯ ಡಿ. ಲಿಟ್ ಪ್ರಶಸ್ತಿಯನ್ನು ನೀಡಿದೆ.

ಶ್ರೀಯುತರು ಪತ್ರಿಕೋದ್ಯಮದಲ್ಲಿ ಸಾಕಷ್ಟು ಹೆಸರು ಪಡೆದವರಾಗಿದ್ದು, ಪತ್ರಿಕೋದ್ಯಮದ ಪರಿಚಯ ಬಗ್ಗೆ ಆಂಗ್ಲ ಭಾಷೆಯಲ್ಲೂ, ಹಲವಾರು ನಾಟಕಗಳನ್ನು ತೆಲುಗಿನಲ್ಲೂ ಬರೆದು ಖ್ಯಾತರಾಗಿದ್ದಾರೆ. ಅವರ ವಿಶೇಷ ಕೃಷಿ ಗಾಂಧಿ ಸಾಹಿತ್ಯ ಅನುವಾದಕ್ಕೆ ಮೀಸಲು. ಅವರ ಭಗವದ್ಗೀತಾ ವ್ಯಾಖ್ಯಾನ ತೆಲುಗಿನಲ್ಲಿ ಅತಿಪ್ರಸಿದ್ಧವಾದದ್ದು.

ಹೀಗೆ ಹಲವು ಹನ್ನೊಂದು ತೆರನಾದ ಪ್ರತಿಭೆಗಳನ್ನು ಹೊಂದಿದ ಶ್ರೀ ರಾವುಲ ಸೂರ್ಯನಾರಾಯಣ ಮೂರ್ತಿ ಅವರಿಗೆ ಡಿ. ಲಿಟ್. ಬಂದ ತರುಣದಲ್ಲಿ ಸಪ್ತಗಿರಿ ಸಂಪಾದನಾ ವಿಭಾಗ ಅವರನ್ನು ಗೌರವಿಸಿತು.

ಡಾ॥ ರಾವುಲ ಅವರ ಸಾಹಿತ್ಯ; ಸಾಮಾಜಿಕ ಕೃಷಿ ಉತ್ತರೋತ್ತರ ಹೆಚ್ಚು ಹೆಚ್ಚು ಹರಡಲಿ ಎಂದು ಅಧ್ಯಕ್ಷತೆ ವಹಿಸಿದ್ದ ವಿದ್ವಾನ್ ವಿಶ್ವಂ ಬಯಸಿದರು. ಶ್ರೀ ಅನ್ನಾಜಿರಾವ್ ಅವರ ಅಭಿನಂದನ ಪದ್ಯವಾಚನ, ಶ್ರೀ ಎಂ ಕೊಂಡಮಾಚಾರ್ಯರ ಸ್ನೇಹಾದರ ವಚನಗಳ ತರುವಾಯ ಸಪ್ತಗಿರಿಯ ಸಂಪಾದಕ ಶ್ರೀ ಕೆ. ಸುಬ್ಬರಾಯರು ಸಾಹಿತ್ಯ ರಂಗದಲ್ಲಿ ಡಾ॥ ರಾವುಲ ಅವರ ಸಾಧನೆಯನ್ನು ಕೊಂಡಾಡಿದರು. ತಿ. ತಿ. ದೇವಸ್ಥಾನಗಳ ಮುದ್ರಣಶಾಲೆಯ ಮ್ಯಾನೇಜರ್ ಶ್ರೀ ವಿಜಯಕುಮಾರ ರೆಡ್ಡಿ ಯವರು ಶ್ರೀಯುತರಿಗೆ ಹಾರತುರಾಯಿಗಳನ್ನರ್ಪಿಸಿ ಸನ್ಮಾನಿಸಿದರು. ಶ್ರೀ ಪ್ರಭಾಕರರಾವ್ ವಂದನಾರ್ಪಣೆ ಮಾಡಿದರು.



ಸ್ವಾಮಿ ರಂಗಾನಾಥಾನಂದ ಅವರು ತಿರುಪತಿಯಲ್ಲಿ ಅಂಗವಿಕಲರಿಗೆ ಕಾಲಿಪರ್ಸ್‌ಗಳನ್ನು ವಿತರಿಸುತ್ತಿರುವಿಕೆ. ಅವರ ಪಕ್ಕದಲ್ಲಿ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀ ನಾರಾಯಣ.

## ಆಂಧ್ರದಲ್ಲಿನ ಅಂಗವಿಕಲರಿಗೆ ಉಚಿತ ಕೃತ್ರಿಮ ಅವಯವಗಳು

ಅಂಗವಿಕಲರಿಗೆ ಕೃತ್ರಿಮ ಅವಯವಗಳನ್ನು ಉಚಿತವಾಗಿ ನೀಡುವುದನ್ನು ಆಂಧ್ರ ಪ್ರದೇಶದ ಇತರ ಪ್ರಾಂತ್ಯಗಳಿಗೂ ವಿಸ್ತರಿಸುವ ಯೋಜನೆಯೊಂದು ಸಿದ್ಧವಾಗಿದೆ. ಅಲ್ಲಲ್ಲಿ ಸ್ಥಳೀಯರ ಸಹಕಾರದಿಂದ ಶಿಕ್ಷಣ ಶಿಬಿರಗಳನ್ನು ನಡೆಸಿ ನಂತರ ಕೃತ್ರಿಮ ಅವಯವಗಳನ್ನು ವಿತರಿಸಲಾಗುವುದು. ಈಚೆಗೆ ಅನಂತಪುರದ ಪೆನುಗೊಂಡೆಯಲ್ಲಿ ಸ್ಥಳೀಯ ಲಯನ್ಸ್ ಕ್ಲಬ್ ಸಹಕಾರದಿಂದ ಪೋಲಿಯೋ ಬಾಧಿತರಿಗೆ ಶಿಕ್ಷಣ ಶಿಬಿರ ನಡೆಸಿ ಉಚಿತವಾಗಿ ಕೃತ್ರಿಮ ಅವಯವ ವಿತರಣೆ ಮಾಡಲಾಯಿತು.

ತಿರುಪತಿಯಲ್ಲಿ ವಿಕಲಾಂಗರ ಪುನಶ್ಚರಣ ಶಿಬಿರವನ್ನು ಸ್ಥಳೀಯ ಸತ್ಯಸಾಯಿ ಸೇವಾ ಸಂಘ ಸಹಕಾರದಿಂದ ನಡೆಸಿದ ನಂತರ, ರಾಮಕೃಷ್ಣಾಶ್ರಮದ ಹೈದರಬಾದ್‌ನ ಸ್ವಾಮಿ ರಂಗನಾಥಾನಂದ ಅವರು ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಯಣ ಅವರ ಅಧ್ಯಕ್ಷತೆಯಲ್ಲಿ 60 ಮಂದಿಗೆ ಕಾಲಿಪರ್ಸ್‌ಗಳನ್ನು ನೀಡಿದರು.

ಗೀತಾ ಜಯಂತಿ ಸಂದರ್ಭದಲ್ಲಿ ಗೀತಾಪಾರಾಯಣದ ರೋಲಿಂಗ್ ಟ್ರೋಫಿಯನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಲಕ್ಷ್ಮೀನಾರಾಯಣ ಅವರು ನೀಡುತ್ತಿರುವಿಕೆ.



## ಗೀತಾಜಯಂತಿ ಉತ್ಸವಗಳು

ಹಿಂದೂ ಧರ್ಮ ರಕ್ಷಣ ಸಂಸ್ಥೆಯ ಆಶ್ರಯದಲ್ಲಿ ತಿರುಪತಿಯ ಅನ್ನಮಾಚಾರ್ಯ ಕಳಾಮಂದಿರದಲ್ಲಿ ನಾಲ್ಕು ದಿನಗಳ ಕಾಲ ಗೀತಾಜಯಂತಿ ಉತ್ಸವಗಳು ಯಶಸ್ವಿಯಾಗಿ ನಡೆದವು.

4-12-84 ರಂದು ನಡೆದ ಜಯಂತ್ಯುತ್ಸವದ ಸಮಾರಂಭದಲ್ಲಿ ಗಾಗಿಲ್ಲಾಪುರಂನ ಸ್ವಾಮಿ ತ್ರಿವಿಕ್ರಮಾನಂದ ಸರಸ್ವತಿ ಹಾಗೂ ಕಾರಂಚೇಡು ಸ್ವಾಮಿಗಳು ಸಭಿಕರಿಗೆ ಗೀತಾಜ್ಞಾನಗಂಗೆಯನ್ನು ಪ್ರಸಾದಿಸಿದರು. ಶ್ರೀ ಎಂ. ಕೊಂಡಮಾಚಾರ್ಯರು ಗೀತಾಪಾರಾಯಣ ಮಾಡಿದರು. ತತ್ಸಂಬಂಧದಲ್ಲಿ ಹೈಸ್ಕೂಲು ವಿದ್ಯಾರ್ಥಿಗಳಿಗಾಗಿ ಏರ್ಪಡಿಸಿದ್ದ ಗೀತಾ ಸ್ಪರ್ಧೆಗಳಲ್ಲಿ ವಿಜೇತರಿಗೆ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರು ಪುಸ್ತಕ ಬಹುಮಾನ ವಿತರಣೆ ಮಾಡಿದರು. ಗೀತಾ ಜಯಂತಿಯ ಆರಂಭ ವಕ್ತರಾಗಿ ಶ್ರೀ ಮಲ್ಲಾದಿ ಚಂದ್ರಶೇಖರ ಶಾಸ್ತ್ರಿಗಳು ಗೀತೆಯ ಮಹತ್ವವನ್ನು ತಿಳಿಸಿದರು. ಶ್ರೀ ಸಮುದ್ರಾಲ ಲಕ್ಷ್ಮಣಯ್ಯ ಅವರು ವಂದಿಸಿದರು.

## ಕಲ್ಯಾಣ ಮಂಟಪದ ಶಂಕುಸ್ಥಾಪನೆ

ನಲ್ಲಗೊಂಡ ಜಿಲ್ಲೆಯ ಕೋದಾಡದಲ್ಲಿ ಹೊಸ ಕಲ್ಯಾಣ ಮಂಟಪ ನಿರ್ಮಾಣಕ್ಕೆ ಶಂಕುಸ್ಥಾಪನೆ ಈಚೆಗೆ ಮಾಡಲಾಯಿತು.

ಶಂಕುಸ್ಥಾಪನೆ ಮಾಡಿದನಂತರ ನಡೆದ ಸಭೆಯಲ್ಲಿ ತಿ. ತಿ. ದೇ. ಬೋರ್ಡ್ ಅಧ್ಯಕ್ಷ ಶ್ರೀ ವಿ. ಕೆ. ಡಿ. ವಿ. ಸತ್ಯನಾರಾಯಣ ರಾಜು ಅವರು ಮಾತನಾಡುತ್ತ ಹೊಸದಾಗಿ ಐವತ್ತು ಕಲ್ಯಾಣ ಮಂಟಪಗಳ ನಿರ್ಮಾಣಕ್ಕೆ ತೀರ್ಮಾನ ಮಾಡಲಾಗಿದೆಯೆಂದೂ, ಈಗಾಗಲೇ ಅರವತ್ತು ಕಲ್ಯಾಣ ಮಂಟಪಗಳು ನಿರ್ಮಾಣದ ಹಂತದಲ್ಲಿವೆಯೆಂದೂ ತಿಳಿಸಿದರು.

ಅಧ್ಯಕ್ಷತೆ ವಹಿಸಿದ್ದ ತಿ. ತಿ. ದೇ. ಬೋರ್ಡ್ ಸದಸ್ಯ ಶ್ರೀ ನರಸಿಂಗ ನಾಯಕ್ ಅವರು ತಿ. ತಿ. ದೇ. ಗಳ ಧಾರ್ಮಿಕ ಕಾರ್ಯಕ್ರಮಗಳಲ್ಲಿ ಜನ ಹೆಚ್ಚು ಹೆಚ್ಚು ಪಾಲುಗೊಳ್ಳಬೇಕೆಂದು ಕರೆ ನೀಡಿದರು.

ಹಿಂದೂ ಧರ್ಮ ರಕ್ಷಣ ಸಂಸ್ಥೆ ತನ್ನ ಧಾರ್ಮಿಕ ಕಾರ್ಯಕ್ರಮಗಳಿಗಾಗಿ ದತ್ತು ಸ್ವೀಕರಿಸಿದ ಗ್ರಾಮ ಕೋದಾಡವೆಂದೂ ಇಲ್ಲಿ ಕಲ್ಯಾಣ ಮಂಟಪ ನಿರ್ಮಾಣವಾಗುವುದರಿಂದ ಅದರ ಧಾರ್ಮಿಕ ಕಾರ್ಯಕ್ರಮಗಳು ಹೆಚ್ಚುಗೊಳ್ಳುವುದೆಂದೂ ತಿ. ತಿ. ದೇ. ಪೌರಸಂಬಂಧಾಧಿಕಾರಿ ಡಾ॥ ರಾವುಲ ಸೂರ್ಯನಾರಾಯಣ ಮೂರ್ತಿ ತಿಳಿಸಿದರು. ತಿ. ತಿ. ದೇ. ಬೋರ್ಡ್ ಸದಸ್ಯ ಪಿ. ವೆಂಕಟೇಶ್ವರಲು ಅವರೂ ಮಾತನಾಡಿದರು.

ನಂತರ ಮಟ್ಟ ಪಲ್ಲಿಯಲ್ಲಿ ಕಲ್ಯಾಣ ಮಂಟಪ ನಿರ್ಮಾಣಕ್ಕೆ ತಿ. ತಿ. ದೇ. ಬೋರ್ಡ್ ಸದಸ್ಯ ಶ್ರೀ ನರಸಿಂಗನಾಯಕ್ ಅವರು ಶಂಕುಸ್ಥಾಪನೆ ಮಾಡಿದರು.



ಕೋದಾಡದಲ್ಲಿನ ಕಲ್ಯಾಣಮಂಟಪದ ಶಂಕುಸ್ಥಾಪನಾ ಸಭೆಯಲ್ಲಿ ಮಾತನಾಡುತ್ತ ತಿ. ತಿ. ದೇ. ಬೋರ್ಡ್ ಅಧ್ಯಕ್ಷರು ಶ್ರೀ ವಿ. ಕೆ. ಡಿ. ವಿ. ಸತ್ಯನಾರಾಯಣರಾಜು ಅವರು. ಕುಳಿತಿರುವವರಲ್ಲಿ ತಿ. ತಿ. ದೇ. ಬೋರ್ಡ್‌ನ ಇಬ್ಬರು ಸದಸ್ಯರು — ಶ್ರೀ ನರಸಿಂಹನಾಯಕ್ (ಸಮಾರಂಭದ ಅಧ್ಯಕ್ಷರು) ಹಾಗೂ ಶ್ರೀ ಪಿ. ವೆಂಕಟೇಶ್ವರುಲು ಅವರನ್ನು ಕಾಣಬಹುದು.

## ತಿ. ತಿ. ದೇ. ಉದ್ಯೋಗಿಗಳಿಗೆ ಹಿತವಚನ

—ಸ್ವಾಮಿ ರಂಗನಾಥಾನಂದ ಅವರಿಂದ

ಹೈದರಾಬಾದಿನ ರಾಮಕೃಷ್ಣಾಶ್ರಮದ ಸ್ವಾಮಿ ರಂಗನಾಥಾನಂದ ಅವರು ತಿ. ತಿ. ದೇ. ಉದ್ಯೋಗಿಗಳಿಗೆ ಸೇವಾಧರ್ಮದ ಬಗ್ಗೆ ಉಪನ್ಯಾಸ ನೀಡಿ ಉದ್ಯೋಗಿಗಳು ತಮ್ಮನ್ನು ತಾವು ತೊಡಗಿಸಿಕೊಂಡು ತನ್ಮೂಲಕ ದೇಶದ ಅಭಿವೃದ್ಧಿಯಲ್ಲಿ ಸಕ್ರಿಯವಾಗಿ ಕಾರಣರಾಗಬೇಕೆಂದು ಕರೆ ನೀಡಿದರು.

ಸ್ವಾಮಿ ರಂಗನಾಥಾನಂದರು ತಿ. ತಿ. ದೇ. ಉದ್ಯೋಗಿಗಳನ್ನು ಕುರಿತು ಮಾತನಾಡುವ ಮೊದಲು ಅವರನ್ನು ಸ್ವಾಗತಿಸುತ್ತಿರುವ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರು. ಮಧ್ಯದಲ್ಲಿ ಆಂಧ್ರಪ್ರದೇಶದ ನಿವೃತ್ತ ಮುಖ್ಯ ಕಾರ್ಯದರ್ಶಿ ಶ್ರೀ ವಿಠಲ್ ಅವರು.



## ಮುಂದಿನ ಸಂಚಿಕೆಯಲ್ಲಿ .... .... ....

### ಸಪ್ತಗಿರಿ ಜನವರಿ — 1985

**ತೊರವೆಯ ನರಸಿಂಹ**
– ಆದ್ಯ ರಾಮಾಚಾರ್ಯ

**ದಕ್ಷಿಣಕಾಶಿ ತಿ. ನರಸೀಪುರ**
– ಎ. ಪಂಕಜ

**ಸೌಂದರ್ಯಲಹರಿ**
– ವಿದ್ವಾನ್ ಬ.ನ. ಗುಂಡೂರಾವ್

**ಸೂರ್ಯ ಚಿಕಿತ್ಸೆ**
– ಕೆ. ಕೇಶವಮೂರ್ತಿ

**ತೊಂಡಮಂಡಲದ ವಿಷ್ಣು ಕ್ಷೇತ್ರಗಳು** – ರಘುಸುತ

**ಪುರಂದರದಾಸರ ಪದಗಳಲ್ಲಿ ಆಂಧ್ರದೇಶದ ಪುಣ್ಯಕ್ಷೇತ್ರಗಳು**
ಡಾ॥ ಕೆ. ಸರ್ವೋತ್ತಮನ್

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದದಲ್ಲೂ ಬರೆಯಬೇಕು. ಬರೆಯಿರಿ – ವೆಲ್‌ಫೇರ್ ಆಫೀಸರ್ ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

## ತಿಂಗಳಿನ ಮುಖ್ಯ ದಿನಗಳು

### ಜನವರಿ 1985

| | | |
|---|---|---|
| 1 | ಮಂಗಳವಾರ | ವರ್ಷದಾರಂಭ |
| 3 | ಗುರುವಾರ | ವೈಕುಂಠ ಏಕಾದಶಿ, ಶ್ರೀ ಕಪಿಲೇಶ್ವರಸ್ವಾಮಿ ತೆಪ್ಪೋತ್ಸವ–ಪ್ರಾರಂಭ |
| 5 | ಶನಿವಾರ | ಶ್ರೀ ಕಪಿಲೇಶ್ವರಸ್ವಾಮಿ ತೆಪ್ಪೋತ್ಸವ ಸಮಾಪ್ತಿ |
| 6 | ಭಾನುವಾರ | ಆಂಡಾಳ್ ನೀರಾಟ್ಟೋತ್ಸವ, ಶ್ರೀ ಕಪಿಲೇಶ್ವರ ಸ್ವಾಮಿ–ಸನ್ನಿಧಿಯಲ್ಲಿ ಆರ್ದ್ರಾದರ್ಶನೋತ್ಸವ |
| 13 | ಭಾನುವಾರ | ಭೋಗಿ ಹಬ್ಬ |
| 14 | ಸೋಮವಾರ | ಮಕರ ಸಂಕ್ರಮಣ |
| 15 | ಮಂಗಳವಾರ | ಕನೂ ಹಬ್ಬ |
| 26 | ಶನಿವಾರ | ಗಣತಂತ್ರದಿನ |
| 28 | ಸೋಮವಾರ | ರಥಸಪ್ತಮಿ |
| 29 | ಮಂಗಳವಾರ | ಭೀಷ್ಮಾಷ್ಟಮಿ |
| 30 | ಬುಧವಾರ | ಮಧ್ವನವಮಿ, ಗಾಂಧೀವರ್ಧಂತಿ |

ತಿ. ತಿ. ದೇ. ಉದ್ಯೋಗಿಗಳನ್ನು ಕುರಿತು, ಆಡಳಿತ ಅಭಿವೃದ್ಧಿಯ ಬಗ್ಗೆ ಮಾತನಾಡುತ್ತ ಸ್ವಾಮಿಜೀ ಅವರು ಕೆಲಸದೊಂದಿಗೆ ತಮ್ಮನ್ನು ತಾವು ಗುರುತಿಸಿ ಕೊಂಡು ಸ್ವಾರ್ಥ ರಾಹಿತ್ಯದಿಂದ ಕೆಲಸ ಮಾಡಿದಾಗಲೇ ಊರ್ಜಿತವೆಂದೂ ಹೇಳುತ್ತ ಭಾರತ, ಭಾಗವತಗಳ ಉದಾಹರಣೆಗಳಿಂದ ತಮ್ಮ ಮಾತುಗಳನ್ನು ಮನಗೊಳಿಸಿದರು.

ಅಧ್ಯಕ್ಷತೆ ವಹಿಸಿದ್ದ ಆಂಧ್ರಪ್ರದೇಶದ ನಿವೃತ್ತ ಮುಖ್ಯ ಕಾರ್ಯದರ್ಶಿ ಶ್ರೀ ವಿಠಲ್ ಅವರು – ಸ್ವಾಮಿಜಿಯವರು ಭಾರತಾದ್ಯಂತ ಸಾರ್ವಜನಿಕ ಆಡಳಿತ ಸಂಸ್ಥೆಗಳಲ್ಲಿ ಆಡಳಿತದ ಸಾಮರ್ಥ್ಯ, ಸೌಶೀಲ್ಯಗಳಿಗಾಗಿ ಉಪನ್ಯಾಸಗಳನ್ನು ನೀಡುವುದರಲ್ಲಿ ದಶಕಗಳಿಂದಲೂ ತೊಡಗಿ ಹೆಸರಾಗಿದ್ದಾರೆಂದು ತಿಳಿಸಿದರು.

ಸ್ವಾಮಿಜೀಯವರ ಆಂಗ್ಲ ಭಾಷಣವನ್ನು ತೆಲುಗಿಗೆ ಅನುವಾದಿಸುತ್ತಲೇ ಸೂಕ್ತ ಉದಾಹರಣೆಗಳನ್ನು ಸಮಕಾಲೀನ ಜೀವನದಿಂದ ತೆಗೆದು ನೀಡುತ್ತ, ಸೇವಾಧರ್ಮ ಎಲ್ಲೆಡೆ ಹರಡಲಿ ಎಂದು ತಿ. ತಿ. ದೇ. ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ಸುಬ್ಬರಾಯುಲು ಅವರು ಹಾರೈಸಿದರು.

ಅತಿಥಿಗಳ ಪರಿಚಯ, ಸ್ವಾಗತ ಮಾಡುತ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಯಣ ಅವರು, ಸ್ವಾಮಿ ರಂಗನಾಥಾನಂದ, ಹಾಗೂ ಶ್ರೀ ವಿಠಲ್ ಅವರುಗಳ ಸಾರ್ವಜನಿಕ ಸೇವೆಯನ್ನು ಶ್ಲಾಘಿಸಿದರು.

## ತಿರುಚಾನೂರಿನಲ್ಲಿ ಯಶಸ್ವಿ ಬ್ರಹ್ಮೋತ್ಸವ

ತಿರುಚಾನೂರಿನಲ್ಲಿ ಶ್ರೀ ಪದ್ಮಾವತೀ ಅಮ್ಮನವರ ವಾರ್ಷಿಕ ಬ್ರಹ್ಮೋತ್ಸವಗಳು ಯಶಸ್ವಿಯಾಗಿ ನಡೆದವು. ಅತಿಹೆಚ್ಚು ಜನ ದಿನದಿನವೂ ಬಂದು ತಿರುಚಾನೂರಿನ ಆಲಯದ ವಿವಿಧ ಉತ್ಸವಗಳನ್ನು ದರ್ಶಿಸಿ ಆನಂದಿತರಾದರೆಂದು ವರದಿಗಳು ತಿಳಿಸಿವೆ.

27–11–84 ರಂದು ನಡೆದ ಬ್ರಹ್ಮೋತ್ಸವ ಚಕ್ರಸ್ನಾನದ ಸಂದರ್ಭದಲ್ಲಿ ಅಮ್ಮನವರನ್ನು ಆಂಧ್ರಪ್ರದೇಶದ ರಾಜ್ಯಪಾಲ ಡಾ॥ ಶಂಕರ ದಯಾಳ ಶರ್ಮ ದಂಪತಿಗಳು ಸಂದರ್ಶಿಸಿದರು. ಅಂದಿನ ಚಕ್ರಸ್ನಾನದಲ್ಲಿ ಅವರೂ ಭಾಗವಹಿಸಿದರು. ಹೊಸ ಕಾರ್ಯನಿರ್ವಹಣಾಧಿಕಾರಿ ಶ್ರೀ ಲಕ್ಷ್ಮೀನಾರಾಯಣ ಅವರು ರಾಜ್ಯಪಾಲದಂಪತಿಗಳನ್ನು ಸ್ವಾಗತಿಸಿ, ಚಕ್ರಸ್ನಾನದ ಮೇಲು ವಿಚಾರಣೆಯನ್ನು ನಿರ್ವಹಿಸಿದರು.

Edited and Published on behalf of the T. T. Devasthanams by K. Subba Rao, M.A., and Printed at
T. T. D. Press by M. Vijayakumar Reddy, Manager, T. T. D. Press, Tirupati – 517501.

